| ಪದ್ಯಸೂಚನೆ | ಅಧ್ಯಾಯ | ಪದ್ಯ | ಪುಟ |
|---|---|---|---|
| ಹರಿಕಥಾಮೃತಸಾರವಿದು | ೧೩ | ೩೨ | ೧೧೨ |
| ಹರಿಕಥಾಮೃತಸಾರ ಶ್ರೀಮದ್ಗುರುವರ | ೩೩ | ೧ | ೨೭೧ |
| ಹರಿಗುರುಗಳರ್ಚಿಸದ ಪಾಪಾತ್ಮರಸ್ತ | ೩೨ | ೪೪ | ೨೬೭ |
| ಹರಿಯು ನಾರಾಯಣನು ಕೃಷ್ಣನು | ೨೧ | ೨ | ೧೬೯ |
| ಹರಿಯೆ ಪಂಚಾಶದ್ವರಣ ಸುಸ್ವರ | ೯ | ೧ | ೬೮ |
| ಹರಿಯೆ ಮುಖ್ಯನಿಯಾಮಕನು | ೧೧ | ೧೪ | ೮೬ |
| ಹರಿ ಸಮೀರಾವೇಶಯುತನರ | ೨೧ | ೧೧ | ೧೭೨ |
| ಹರಿಸಿರಿವಿರಿಂಚೀರ ಭಾರತಿ | ೨೦ | ೨೪ | ೧೬೭ |
| ಹರಿಸಿರಿವಿರಿಂಚೀರ ಮುಖನಿರ್ಜರರ | ೨೧ | ಸಂ ಸೂ | ೧೬೯ |
| ಹಲಧರಾನುಜ ಮಾಳ್ಪ ಕೃತ್ಯವ | ೨೪ | ೨೧ | ೨೧೪ |
| ಹಲವು ಕರ್ಮವಮಾಡಿ ದೇಹವ | ೧೩ | ೨೧ | ೧೦೯ |
| ಹಲವುಬಗೆಯಲಿ ಹರಿಯ | ೧೨ | ೨೮ | ೯೯ |
| ಹಾನಿವೃದ್ಧಿ ಜಯಾಪಜಯಗಳ | ೧೧ | ೧೬ | ೮೭ |
| ಹಿಂದೆ ಪ್ರಳಯೋದಕದಿ ತಾವರ | ೨೨ | ೧೨ | ೧೮೫ |
| ಹೀನಕರ್ಮಗಳಿಂದ ಬಹುವಿಧ | ೨೩ | ೫ | ೧೯೪ |
| ಹೀನ ಸತ್ಕರ್ಮಗಳೆರಡು ಪವಮಾನ | ೨೩ | ೧೫ | ೧೯೬ |
| ಹುತವಹಗೆ ದ್ವಿಗುಣಾಧಮರು | ೨೦ | ೧೧ | ೧೬೩ |
| ಹುತವಹಾರ್ಧಾಂಗಿನಿಗೆ ಚಂದ್ರನ | ೨೬ | ೫ | ೨೨೭ |
| ಹುತವಹಾರ್ಕಾದ್ಯಮರರೆಲ್ಲಾ | ೩೦ | ೨೨ | ೨೪೭ |
| ಹೃದಯದೊಳಗಿಹುದಷ್ಟದಳ | ೮ | ೬ | ೬೦ |
| ಹೃದಯದೊಳಗೆ ವಿರಕ್ತಿ ಕೇಸರ | ೯ | ೨೪ | ೭೪ |
| ಹೇಯವಸ್ತುಗಳಿಲ್ಲ ಊಪಾದೇಯ | ೧೭ | ೧೯ | ೧೩೮ |
| ಹೊತ್ತುಹೊತ್ತಿಗೆ ಪಾಪಕರ್ಮಪ್ರವರ್ತಕರ | ೧೬ | ೯ | ೧೩೧ |
| **ಕ್ಷಿತಿಯೊಳಗೆ** ಮಣಿಮಂತ ಮೊದಲಾದ | ೧ | ೮ | ೩ |
| ಕ್ಷೀರಗತ ರಸರೂಪಗಳು | ೪ | ೫ | ೨೩ |
| ಕ್ಷೀರದಧಿನವನೀತ ಘೃತದೊಳು | ೮ | ೨೬ | ೬೫ |

| ಪದ್ಯಸೂಚನೆ | ಅಧ್ಯಾಯ | ಪದ್ಯ | ಪುಟ |
|---|---|---|---|
| ಕ್ಷೀರವಾನಿ ಸರಸ್ವತಿ ಜಗತ್ತಾರ | ೩೧ | ೧೫ | ೨೧೨ |
| ಕ್ಷುಧೆಯಗೋಸುಗ ಪೋಗಿ | ೧೭ | ೨೯ | ೧೨೯ |
| ಕ್ಷೋಣಿಪತಿ ಸುತನೆನಿಸಿ ಕೈದುಗ್ಗಾಣಿ | ೧[illegible] | ೨೦ | ೧೫೨ |


# ಶುದ್ಧಾಶುದ್ಧ ಪತ್ರಿಕೆ

## ವಿ ಜ್ಞಾ ಪ ನೆ.

(ಇದೇ ಮೊದಲನೆಯ ಮುದ್ರಣವಾದುದರಿಂದ ಈ ಗ್ರಂಥದಲ್ಲಿ ಅನೇಕ ಲೋಪದೋಷಗಳಿರಬಹುದು. ಕ್ಷಮಾಶೀಲರಾದ ಸಜ್ಜನರು ಅಂಥವುಗಳನ್ನು ತಿದ್ದಿಕಳುಹಿಸಿದರೆ ಕೃತಜ್ಞತೆಯಿಂದ ಮುಂದಣ ಮುದ್ರಣದಲ್ಲಿ ಸರಿಪಡಿಸುತ್ತೇವೆ. ಮಹನೀಯರು ಈ ಗ್ರಂಥಪಠನಕ್ಕೆ ಮೊದಲು ಶುದ್ಧಪತ್ರಿಕೆಯಂತೆ ತಿದ್ದಿಕೊಳ್ಳಬೇಕಾಗಿ ಪ್ರಾರ್ಥನೆ —ಸಂ.)

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೩ | ೯ | ರಚಿಸ | ರಚಿಸಿ |
| ೯ | ೭ | ತನುಮನ | ತನುಮನೆ |
| ೧೨ | ೧ | ತೋಂದುಕನು | ತೋದಕನು |
| ೧೨ | ೩ | ನೈದವನು | ನೈದುವನು |
| ೧೭ | ೭ | ಕರ್ತ | ಕರ್ತೃ |
| ೧೯ | ೧೫ | ನಂದದಲಿ | ರಂದದಲಿ |
| ೨೩ | ೨೪ | ಗಿದ್ದವರ ವರ | ಗಿದ್ದವರವರ |
| ೨೨ | ೮ | ದ್ವನು | ದ್ಧನು |
| ೩೧ | ೧೩ | ತಾನಪಕರಣ | ತಾನುಪಕರಣ |
| ೩೪ | ೧ | ಪ್ರದಕ್ಷಿಣೆ | ಪ್ರದಕ್ಷಿಣೆ |
| ೩೫ | ೧೫ | ೪ರ ವಿದೂರನ | ೪ರವಿದೂರನ |
| ೩೫ | ೧೮ | ದರನೆ | ವರಗೆ |
| ೩೬ | ೨೦ | ಪುರುಷಗ | ... ಪುರುಷರುಗ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೩೭ | ೨೪ | ಗರಿವಿದೂರ | ಗರವಿದೂರ |
| ೩೮ | ೪ | ಚೇತನನ | ಚೇತನರ |
| ೪೫ | ೩ | ಜಲದಲಿಹ | ಬಲದಲಿಹ |
| ೪೯ | ೧೯ | ಜನವಿಮೋಹಕ | ಜಿನವಿಮೋಹಕ |
| ೫೨ | ೮ | ಆದಿಭೌತಿಕ | ಆಧಿಭೌತಿಕ |
| ೫೩ | ೬ | ಕೋರಿಕೊಂಬನು | ತೋರಿಕೊಂಬನು |
| ೫೯ | ೧೫ | -ತುಂದಿಲೊಳಗಿರು | -ತುಂದಿಯೊಳಗಿರು |
| ೬೦ | ೭ | ಮುಧ್ಯೋದರ | ಮಧ್ಯೋದರ |
| ೬೨ | ೧೩ | ಮನವೊಳಿಪ್ಪರು | ಮನದೊಳಿಪ್ಪರು |
| ೬೬ | ೩ | ಪ್ರಸ್ತಾಪ | ಪ್ರಸ್ಥಾವ |
| ೭೨ | ೧೦ | ಸುಷುಮ್ನಕ | ಸುಷುಮ್ನಕೆ |
| ೭೩ | ೨೦ | ಗಮಗಾಗಮನ | ಗಮನಾಗಮನ |
| ೭೫ | ೫ | ಸ್ವಪ್ನಿ | ಸ್ವಪ್ನ |
| ೭೮ | ೧೫ | ಮೂಡಲೇನವರು | ಮಾಡಲೇನವರು |
| ೮೧ | ೨೪ | ಪ್ರತೀಕಾರಾಧಿತಾಂಘ್ರಿ | ಪ್ರತೀಕಾರಾಧಿತಾಂಘ್ರಿ |
| ೮೨ | ೬ | ಜನವಿಮೋಹಕ | ಜಿನವಿಮೋಹಕ |
| ೮೨ | ೮ | ಸಮನಸ | ಸುಮನಸ |
| ೮೭ | ೧೬ | ದ್ರುವ್ಯಗತದಾಕಾರ | ದವ್ಯಗ ತದಾಕಾರ |
| ೮೯ | ೨೩ | ಚಲಗಳೂಂದಿಬ್ಬಗೆ | ಚಲಗಳೆಂದಿಬ್ಬಗೆ |
| ೯೩ | ೪ | ಸೂರಗಳ | ಸೂರಿಗಳ |
| ೯೬ | ೧ | ಒತ | ಓತ |
| ೯೯ | ೧೭ | ಹೇಮು ಮಕುಲ | ಹೇ ಮಮಕುಲ |
| ೧೦೧ | ೧೧ | ಹಿಂಕಾರ | ಹೀಂಕಾರ |
| ೧೦೧ | ೨೨ | ವಿಖನ ಸಾಂಡ | ವಿಖನಸಾಂಡ |
| ೧೦೨ | ೧೪ | ಅಹುವ ಷ್ಪು | ಅಹುವಷ್ಟು |
| ೧೦೬ | ೨೨ | ವಿಪಶ್ಚಿತರು | ವಿಪಶ್ಚಿತರ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೦೯ | ೧೦ | ತಿಳಿವುದೀ | ತಿಳಿಯದೀ |
| ೧೦೯ | ೧೧ | ಫಲಸುಪುಷ್ವಾ | ಫಲಸುಪುಷ್ಪಾ |
| ೧೧೧ | ೧೨ | ನೀಯನೆಂದೆಂದು | ನೀವನೆಂದೆಂದು |
| ೧೧೧ | ೨೦ | ಮಾತುಳ | ಮಾತುಗಳ |
| ೧೧೪ | ೩ | ಂತುಹರ | ಕಂತುಹರ |
| ೧೧೮ | ೧ | ಕಾರುಣಾಹ್ವಯ | ಕಾರಣಾಹ್ವಯ |
| ೧೨೨ | ೧೨ | ಪಾರುಗಾಣಿಸಿ | ಪಾರಗಾಣಿಸಿ |
| ೧೨೪ | ೧೩ | ಪಾದವೆನಿಸವು | ಪಾದವೆನಿಪವು |
| ೧೨೬ | ೧ | ಮರೇಂದ್ರ | ಸುರೇಂದ್ರ |
| ೧೨೬ | ೩ | ಊರ್ದ್ವ | ಊರ್ಧ್ವ |
| ೧೨೯ | ೧೩ | ರರುಗ | ರುರಗ |
| ೧೩೯ | ೨೧ | ಗುಣಗಳಿರೆ | ಗುಣಗಳಿಗೆ |
| ೧೪೨ | ೨ | ಪ್ರಾಣ ಮತ | ಪ್ರಾಣಮತ |
| ೧೫೬ | ೫ | ನಿಷ್ಕಿಂಚಜನಸುಪ್ರೀಯ | ನಿಷ್ಕಿಂಚನಜನಪ್ರಿಯ |
| ೧೬೫ | ೨೦ | ಅಮಿತನಾಖಾತ್ಯ | ಅಮಿತನಾಖ್ಯಾತ್ಯ |
| ೧೬೬ | ೨೪ | ದುಷ್ತ್ರತಿರ್ | ದುಷ್ತ್ರಕಿರ್ |
| ೧೬೭ | ೧೬ | ಮಹಿಳಾಬು ಧೋಷಾ | ಮಹಿಳಾಬುಧೋಷಾ |
| ೧೬೮ | ೧೨ | ಪರಿಸುವುದ | ಪರಿಸುವುದು |
| ೧೭೦ | ೧೭ | ಕಾಟುಮಾಡದೆ | ಪಾಟುಮಾಡದೆ |
| ೧೭೧ | ೧೮ | ಕರಣಿ | ಕರಣ |
| ೧೭೨ | ೧೫ | ಬಾಲೆಯರಿಗಾದಧಮ | ಬಾಲೆಯರಿಂಗಾಧಮರು |
| ೧೭೩ | ೪ | ಮಾರುಜನು | ಮಾರಜನು |
| ೧೭೪ | ೧೨ | ಮೂವನಾರದ | ಮೂವರು ನಾರದ |
| ೧೭೫ | ೧೧ | ಭಗದತ್ತರ ಸುಕತ್ವನ | ಭಗದತ್ತರಸುಕತ್ಥನ |
| ೧೭೫ | ೧೫ | ದ್ಯುನಾಮವ ಸುಭಿಷ್ಮಾರ್ಯರ್ | ದ್ಯುನಾಮವಸುಭೀಷ್ಮಾರ್ಯರ್ |
| ೧೭೬ | ೯ | ಸ ಪಿತೃ | ಸವಿತೃ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೭೭ | ೨೨ | ವಿಷ್ವಕ್ಸೇನನು ಪೆುಕುವರ | ವಿಷ್ವಕ್ಸೇನನುಮೆುಕುವರ |
| ೧೭೮ | ೭ | ಋಷಭಧ್ವಿಜ | ಋಷಭಜ ದ್ವಿಜ |
| ೧೮೦ | ೧೦ | ಮಹಿಷೆ | ಮಹಿಷಿ |
| ೧೮೨ | ೨೨ | ಅನು ಪತಿ | ಅಸುಪತಿ |
| ೧೮೧ | ೩ | ಸ್ಮ್ರ | ಸ್ಮ್ರ |
| ೧೮೧ | ೭ | ಪುಹ್ಯರ | ಪುಷ್ಕರ |
| ೧೮೩ | ೧೫ | ನಳಿನಭವ ಜನಕ | ನಳಿನಭವಜನಕ |
| ೧೮೪ | ೧೦ | ದ್ಯ್ಯಾಪರಾಂತ್ಯ | ದ್ವಾಪರಾಂತ್ಯ |
| ೧೮೫ | ೧೩ | ವಾಗಲಿ | ಲಾಗಲಿ |
| ೧೮೭ | ೧೭ | ಉಪಸ್ತ | ಉಪಸ್ಥ |
| ೧೮೮ | ೧೨ | ವಿಭೂತಿಯ | ವಿಭೂತಿದ |
| ೧೯೧ | ೧೮ | ವಾಲ್ಮಿಕ | ವಾಲ್ಮಿಕಿ |
| ೧೯೯ | ೧೯ | ಪಾಹಿಪಾಹಿತ್ರಾಣ | ಪಾಹಿಪ್ರಾಣತ್ರಾಣ |
| ೨೦೧ | ೪ | ಕಲ್ಯಾದ್ಯಸುರವರ | ಕಲ್ಯಾದ್ಯಸುರಪರ |
| ೨೦೧ | ೪ | ಪೊಂದ್ಯಸುರ | ಪೊಂಬಸುರ |
| ೨೦೧ | ೧೩ | ಕೂಂಡೆ | . ಕೊಂದೆ |
| ೨೦೨ | ೧೩ | ಸಾರ್ಯನ | ಸೂರ್ಯನ |
| ೨೦೨ | ೨೧ | ಕರೆದೊಯ್ಯು | ಕರೆದೊಯ್ದು |
| ೨೦೪ | ೧೨ | ಮುಸಿಗಳಿಗೆ | ಮನುಗಳಿಗೆ |
| ೨೦೬ | ೧ | ಅಪಜಯ | ಅಪಚಯ |
| ೨೦೬ | ೨ | ಮರಣ | ಮರಗಣ |
| ೨೧೧ | ೨೦ | ಕೊಟ್ವ | ಕೊಟ್ಟ |
| ೨೧೬ | ೧೪ | ಲೇಶದ | ಲೇಶವ |
| ೨೧೬ | ೧೫ | ಸುಖದುಃಖ | ದುಃಖಸುಖ |
| ೨೧೮ | ೭ | ತಿಳಿದಹಂ ವಿಶಿಷ್ಟನು | ತಿಳಿದಹಮ್ಮತಿಪಿಶಿಷ್ಟನು |
| ೨೧೮ | ೧೦ | ಕೃತ | ಕೃತು |

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೨೧೮ | ೧೨ | ಪ್ರಮಾದಿ | ಪ್ರಮಾದ |
| ೨೧೯ | ೧೦ | ನಿಯೋಗಿ ಸುದಶೇಂದ್ರಿಯ | ನಿಯೋಗಿಸುದಶೇಂದ್ರಿಯ |
| ೨೨೧ | ೭ | ವ್ರಜೌಕಸ್ತ್ರೀಯರು | ವ್ರಜೌಕಸಸ್ತ್ರೀಯರು |
| | | ವರಸುರಾಸ್ಯಾ | ಸುರಾಸ್ಯಾ |
| ೨೨೨ | ೧೨ | ಮೊದಲಿಂದ | ಮೊದಲಾದ |
| ೨೨೨ | ೨೨ | ಖಗ ಪರಾಣಿಗೆ | ಖಗಪರಾಣಿಗೆ |
| ೨೨೨ | ೨೩ | ಜಾಂಬುವತೀರ ಮಾಯುತ | ಜಾಂಬುವತೀ ರಮಾಯುತ |
| ೨೨೪ | ೩ | ಸರ್ವಾಧಾನ | ಸರ್ವಾಧಾರ |
| ೨೨೪ | ೬ | ಕಾಮ್ಯದ | ಕಾಮದ |
| ೨೨೭ | ೫ | ಮಿತ್ರರಿನಶ್ವಿನಿ | ಮಿತ್ರರಿಗಶ್ವಿನಿ |
| ೨೨೭ | ೧೯ | ಜಾನಜನಕೆ | ಜಾನಜರಿಗೆ |
| ೨೩೦ | ೪ | ಭಾವು | ಭೂವು |
| ೨೩೨ | ೧೩ | ವಿರಾಜಿತದರ್ಪಶರ | ವಿಜಿತಕಂದರ್ಪಶರ |
| ೨೩೮ | ೯ | ವೃಕೋದರನವನಗದೆ | ವೃಕೋದರನವರಗದೆ |
| ೨೩೪ | ೧೫ | ಕಾಯೋ | ಕಾಯೊ |
| ೨೩೪ | ೨೩ | ಸಹೃಜ್ಜನಾಪ್ತನೆ | ಸುಹೃಜ್ಜನಾಪ್ತನೆ |
| ೨೩೭ | ೧೦ | ಪನ್ನಗ ಪಾಹಿ ಭೂಷಣ | ಪನ್ನಗಪಾಹಿಭೂಷಣ |
| ೨೩೭ | ೧೨ | ಯವರಿಂದ್ರಿಂದ್ರ | ಯವರಿಂದಿಂದ್ರ |
| ೨೩೭ | ೧೩ | ಪ್ರಾಣನಕುವರ | ಕಾಮನಕುವರ |
| ೨೩೮ | ೧೨ | ಪಾನಾರ್ಹರಿವರೆಂದ | ಪಾನಾರ್ಹರಿವರೆಂದು |
| ೨೩೮ | ೨೨ | ಕುವಲಯ ಪುರು | ಕುವಲಯಪರು |
| ೨೪೦ | ೧೩ | ಸತ್ವಜೀವರು ಮಾನಿ | ಸತ್ವಜೀವರಮಾನಿ |
| ೨೪೪ | ೨೪ | ಭಂಗವೈದುವರು | ಭಂಗವೈದುವುದು |
| ೨೪೫ | ೧೫ | ಕರೆಸಿವರ | ಕರೆಸಿದರು |
| ೨೪೮ | ೧೩ | ಭಾರ್ಪವಿರಮಣ | ಭಾರ್ಗವಿರಮಣ |
| ೨೪೮ | ೧೪ | ಗಣಗಳೊಳಗವವರ | ಗಣಗಳೊಳಗವರವರ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೨೫೦ | ೩ | ಸದ್ವ್ಯಾಪಾರಿಗತ ಸಂಸಾರಿ | ಸದ್ವ್ಯಾಪಾರಿ ಗತಸಂಸಾರಿ |
| ೨೫೦ | ೭ | ಜಗತ್ತ್ರಿನೊಳಾತ ತನು | ಜಗತ್ತ್ರಿನೊಳಾತತನು |
| ೨೫೨ | ೧೯ | ಸರಸ್ವತಿ | ಸರಸ್ವತೀ |
| ೨೫೨ | ೨೨ | ನವನೀತನೊಳು | ನವನೀತದೊಳು |
| ೨೫೩ | ೯ | ಗೌರಿ ಪಾನಾವ್ಲಸ್ಥ | ಗೌರಿಪಾನಾವ್ಲಸ್ಥ |
| ೨೫೩ | ೧೬ | ಶ್ರೀರಾಮ ರೇಳದಿ | ಶ್ರೀರಾಮರೇಳದಿ |
| ೨೫೪ | ೧೩ | ರಸಗಳನ | ರಸಗಳ |
| ೨೫೪ | ೧೬ | ಗೋಮಯ ಜಾದಿ | ಗೋಮಯಜಾದಿ |
| ೨೫೪ | ೧೭ | ಸ್ಥಿತಿಜಗೋಮಯ ಜಾದಿಯೊಳುಸಂ | ಸ್ಥಿತವಸಂತನಋಷಭ ದೇವನ |
| ೨೫೮ | ೨೦ | ಕ್ವಣಿಕ | ಕ್ವಣಿತ |
| ೨೫೮ | ೨೪ | ಮಾಂಮಾಹಿ | ಮಾಂಪಾಹಿ |
| ೨೫೯ | ೪ | ಸುರವೃಕ್ಷವೃಕ ದನುಜಾರಿ | ಸುರವೃಕ್ಷ ವೃಕದನುಜಾರಿ |
| ೨೬೦ | ೨೨ | ವಕ್ಷವಾಚಸ್ಪತಿ | ದಕ್ಷ ವಾಚಸ್ಪತಿ |
| ೨೬೨ | ೧೫ | ಕ್ಷಣಿತ | ಕ್ವಣಿತ |
| ೨೬೩ | ೧೪ | ತಪೋನಿಧಿಗಳ ಪರಾಜಿತನ | ತಪೋನಿಧಿಗಳಪರಾಜಿತನ |
| ೨೬೩ | ೧೬ | ಮರೀಚ ಪುಲಹಾ | ಮರೀಚ್ಯತ್ರಿಪುಲಹಾ |
| ೨೬೪ | ೧೫ | ಯಯಾತ | ಯಯಾತಿ |
| ೨೬೭ | ೧೫ | ಷೋಡಶಶಕರು | ಷೋಡಶಶತರು |
| ೨೬೭ | ೨೨ | ಗಣವೆಂದು | ಗಣವೆಂತು |
| ೨೬೭ | ೨೩ | ಪರಮಾಪನ್ನಿಜನ | ಪರಮಾಪನ್ನ ಜನ |
| ೨೭೨ | ೧೭ | ಳುಪಶ್ರುತಿ | ....ಳಪಶ್ರುತಿ |

## ಧರ್ಮಬಾಂಧವರಲ್ಲೊಂದು ಮನವಿ —

**ಶ್ರೀ ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ** ಯ ಮೂಲಕ ದಾಸಸಾಹಿತ್ಯವನ್ನು ಸಂಗ್ರಹಿಸಿ, ಸಾಧ್ಯವಿರುವಷ್ಟು ಶುದ್ಧರೀತಿಯಿಂದ ಪರಿಷ್ಕರಿಸಿ, ಪ್ರಕಟಿಸಬೇಕೆಂಬ ಮಹೋದ್ದೇಶದಿಂದ ಪ್ರೇರಿತರಾಗಿ, ಈಗ ನಾಲ್ಕು ವರ್ಷಗಳಿಂದಲೂ ಶಕ್ತ್ಯನುಸಾರ ಪ್ರಯತ್ನಿಸಿದ್ದಾಗಿದೆ ಸಂಸ್ಕೃತಜ್ಞರಲ್ಲದ ಅಶೇಷ ಕರ್ನಾಟಕ ಜನಸಮುದಾಯಕ್ಕೆ, ಧಾರ್ಮಿಕ ನೈತಿಕಾದಿಗಳ ಬೋಧನೆಗೆ ಈ ದಾಸಸಾಹಿತ್ಯಕ್ಕಿಂತ ಉತ್ಕೃಷ್ಟಸಾಧನವು ಮತ್ತೊಂದಿರಲಾರದು ಮಹಾನುಭಾವರಾದ ಪುರಂದರಾದಿ ದಾಸಶ್ರೇಷ್ಠರುಗಳಿಂದ ಲೋಕೋದ್ಧಾರಕ್ಕಾಗಿ ಸೃಷ್ಟಿಸಲ್ಪಟ್ಟ ಅಪಾರವಾದ ಈ ದಾಸಸಾಹಿತ್ಯವು, ಖಿಲವಾಗದಂತೆ ಸಂಗ್ರಹೀತವಾಗಿ ರಕ್ಷಿಸಲ್ಪಡಬೇಕಾದುದು, ಕರ್ನಾಟಕ ಭಾಷಾಜಾಗೃತಿಯ ಈ ದಿನಗಳಲ್ಲಿ ನಡೆಯಬೇಕಾದ ಆವಶ್ಯಕ ಕಾರ್ಯವಾಗಿದೆಯೆಂದು ಪ್ರತ್ಯೇಕ ಹೇಳಬೇಕಾಗಿಲ್ಲವಷ್ಟೆ! ಆದುದರಿಂದ ಧರ್ಮಾಭಿಮಾನಿಗಳಾದ ದೇಶಬಾಂಧವರು, ತಮ್ಮ ಮಿತ್ರಬಾಂಧವರಿಗೂ ಹರಿದಾಸ ಕೀರ್ತನ ತರಂಗಿಣಿಯ ಪರಿಚಯಮಾಡಿಕೊಟ್ಟು, ದಾಸಸಾಹಿತ್ಯ ಸಂಗ್ರಹಣದ ಈ ಸತ್ಕಾರ್ಯವು ನಿರ್ಬಾಧಕವಾಗಿ ನಡೆಯಲು ಅವಕಾಶವನ್ನು ಕಲ್ಪಿಸಿ ಪುಣ್ಯಭಾಗಿಗಳಾಗಬೇಕೆಂದು ಪ್ರಾರ್ಥಿಸುತ್ತೇವೆ

**ಸಂಪಾದಕ.**

॥ ಶ್ರೀ ರಾಮಸಹಾಯಂ ॥

ಶ್ರೀಮತ್ಕವಿಕುಲತಿಲಕ ಶ್ರೀಮನ್ನೃಸಿಂಹ ಭಾಗವತಸುತ

**ಶ್ರೀಮಜ್ಜಗನ್ನಾಥದಾಸರಾಯಕೃತ**

# ಶ್ರೀ ಹರಿಕಥಾಮೃತಸಾರವು

---

ಭಾಮಿನೀಷಟ್ಪದಿ

## ಸಂಧಿ ೧ 'ನಾಂದೀಸಂಧಿ'

ಪದ ೩೧

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಶ್ರೀರಮಣಿ ಕರಕಮಲ ಪೂಜಿತ
ಚಾರು ಚರಣ ಸರೋಜ ಬ್ರಹ್ಮ ಸ
ಮೀರವಾಣಿ ಫಣೀಂದ್ರವೀಂದ್ರ ಭವೇಂದ್ರ ಮುಖವಿನುತ
ನೀರಜ ಭವಾಂಡೋದಯ ಸ್ಥಿತಿ
ಕಾರಣನೆ ಕೈವಲ್ಯದಾಯಕ
ನಾರಸಿಂಹನೆ ನಮಿಪೆ ಕರುಣಿಪುದೆಮಗೆ ಮಂಗಳವ ೧

ಜಗದುದರನತಿ ವಿಮಲಗುಣ ರೂ
ಪಗಳನಾಲೋಚನದಿ ಭಾರತ
ನಿಗಮತತಿಗಳತಿಕ್ರಮಿಸಿ ಕ್ರಿಯಾವಿಶೇಷಗಳ
ಬಗೆ ಬಗೆಯ ನೂತನವ ಕಾಣುತ
ಮಿಗೆ ಹರುಷದಿಂ ಪೊಗಳಿ ಹಿಗ್ಗುವ
ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು ೨

ನಿರುಪಮಾನಂದಾತ್ಮ ಭವ ನಿ
ರ್ಜರ ಸಭಾ ಸಂಸೇವ್ಯ ಋಜುಗಣ
ದರಸ ಸತ್ವ ಪ್ರಚುರ ವಾಣೀ ಮುಖ ಸರೋಜೇನ
ಗರುಡ ಶೇಷ ಶಶಾಂಕದಳಶೇ
ಖರರ ಜನಕ ಜಗದ್ಗುರುವೆ ತ್ವ
ಚ್ಚರಣಗಳಿಗಭಿವಂದಿಸುವೆ ಪಾಲಿಪುದು ಸನ್ಮತಿಯ ೩

ಆರು ಮೂರರಡೊಂದು ಸಾವಿರ
ಮೂರೆರಡು ಶತಶ್ವಾಸ ಜಪಗಳ
ಮೂರು ವಿಧ ಜೀವರೊಳಗಬ್ಜಜಕಲ್ಪ ಪರಿಯಂತ
ತಾ ರಚಿಸಿ ಸತ್ವರಿಗೆ ಸುಖ ಸಂ
ಸಾರ ಮಿಶ್ರರಿ ಗಧಮಜನರಿಗ
ಪಾರ ದುಃಖಗಳೀವ ಗುರು ಪವಮಾನ ಸಲಹೆಮ್ಮ ೪

ಚತುರ ವದನನ ರಾಣಿ ಅತಿರೋ
ಹಿತ ವಿಮಲ ವಿಜ್ಞಾನಿ ನಿಗಮ ಪ್ರ
ತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ
ನತಿಸಿ ಬೇಡುವೆ ಜನನಿ ಲಕುಮಿಾ
ಪತಿಯ ಗುಣಗಳ ತುತಿಪುದಕೆ ಸ
ನ್ಮತಿಯ ಪಾಲಿಸಿ ನೆಲೆಸು ನೀ ಮದ್ವದನ ಸದನದಲಿ ೫

ಕೃತಿರಮಣ ಪ್ರದ್ಯುಮ್ನ ನಂದನೆ
ಚತುರ ವಿಂಶತಿ ತತ್ವಪತಿ ದೇ
ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ
ಸತತ ಹರಿಯಲಿ ಗುರುಗಳಲಿ ಸ
ದ್ರತಿಯ ಪಾಲಿಸಿ ಭಾಗವತ ಭಾ
ರತ ಪುರಾಣ ರಹಸ್ಯ ತತ್ವಗಳರುಪು ಕರುಣದಲಿ ೬

ವೇದಪೀಠ ವಿರಿಂಚಿ ಭವ ಶ
ಕ್ರಾದಿಸುರ ವಿಜ್ಞಾನದಾಯಕ
ಮೋದ ಚಿನ್ಮಯಗಾತ್ರ ಲೋಕ ಪವಿತ್ರ ಸುಚರಿತ್ರ
ಛೇದ ಭೇದ ವಿಷಾದ ಕುಟಿಲಾಂ
ತಾದಿ ಮಧ್ಯ ವಿದೂರನಾದಾ
ನಾದಿಕಾರಣ ಬಾದರಾಯಣ ಪಾಹಿ ಸತ್ರಾಣ ೭

ಕೃತಿಯೊಳಗೆ ಮಣಿಮಂತ ಮೊದಲಾ
ದತಿ ದುರಾತ್ಮರು ಒಂದಧಿಕ ವಿಂ
ಶತಿ ಕುಭಾಷ್ಯವ ರಚಿಸಿ ನಡುಮನೆಯೆಂಬ ಬ್ರಾಹ್ಮಣನ
ಸತಿಯ ಜಠರದೊಳವತರಿಸಿ ಭಾ
ರತಿರಮಣ ಮಧ್ವಾಭಿಧಾನದಿ
ಚತುರ ದಶಲೋಕವಲಿ ಮೆರದಪ್ರತಿಮಗೊಂದಿಸುವೆ ೮

ಪಂಚ ಭೇದಾತ್ಮಕ ಪ್ರಪಂಚಕೆ
ಪಂಚ ರೂಪಾತ್ಮಕನೆ ದೈವಕ
ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ
ಪಂಚ ವಿಂಶತಿ ತತ್ವ ತರತಮ
ಪಂಚಕಿಗಳನು ಪೇಳ್ದ ಭಾವಿ ವಿ
ರಿಂಚನೆನಿಪಾನಂದತೀರ್ಥರನೆನೆವೆ ನನುದಿನವು ೯

ವಾಮದೇವ ವಿರಿಂಚಿತನಯ ಉ
ಮಾ ಮನೋಹರ ಉಗ್ರಧೂರ್ಜಟಿ
ಸಾಮಜಾಜಿನವಸನ ಭೂಷಣ ಸುಮನಸೋತ್ತಂಸ
ಕಾಮಹರ ಕೈಲಾಸಮಂದಿರ
ಸೋಮ ಸೂರ್ಯಾನಳ ವಿಲೋಚನ
ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವ ೧೦

ಕೃತ್ತಿವಾಸನೆ ಹಿಂದೆ ನೀ ನಾ
ಲ್ಕುತ್ತು ಕಲ್ಪ ಸಮೀರನಲಿ ಶಿ
ಷ್ಯತ್ವ ವಹಿಸ್ಯಖಿಳಾಗಮಾರ್ಥಗಳೋದಿ ಜಲಧಿಯಲಿ
ಹತ್ತು ಕಲ್ಪದಿ ತಪವಗೈದಾ
ದಿತ್ಯರೊಳಗುತ್ತಮನೆನಿಸಿ ಪುರು
ಷೋತ್ತಮನ ಪರಿಯಂಕ ಪದವೈದಿದೆಯೊ ಮಹದೇವ ೧೧

ಪಾಕಶಾಸನ ಮುಖ್ಯ ಸಕಲ ದಿ
ವೌಕಸರಿಗಜಿನಮಿಪ ಋಷಿಗಳಿ
ಗೇಕಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ
ಆ ಕಮಲನಾಭಾದಿ ಯತಿಗಳ
ನೀಕಕಾ ನಮಿಸುವೆನು ಬಿಡದೆ ರ
ಮಾಕಳತ್ರನ ದಾಸವರ್ಗಕೆ ನಮಿಪೆ ನನವರತ ೧೨

ಪರಿಮಳವು ಸುಮನದೊಳಗನಲನು
ಮರಣಿಯೊಳಗಿಪ್ಪಂತೆ ದಾಮೋ
ದರನು ಬ್ರಹ್ಮಾದಿಗಳ ಮನದಲಿ ತೋರಿ ತೋರದಲೆ
ಇರುತಿಹ ಜಗನ್ನಾಥ ವಿಠಲನ
ಕರುಣ ಪಡೆವ ಮುಮುಕ್ಷು ಜೀವರು
ಪರಮ ಭಾಗವತರನು ಕೊಂಡಾಡುವುದು ಪ್ರತಿದಿನವು ೧೩

ಅಂತು ಸಂಧಿ ೧ಕ್ಕೆ, ಪದ ೧೩ಕ್ಕೆ ಮಂಗಳಂ

ಶ್ರೀಕೃಷ್ಣಾರ್ಪಣಮಸ್ತು



# ಸಂಧಿ ೨ 'ಕರುಣಾಸಂಧಿ'

ಹರಿ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಶ್ರವಣ ಮನಕಾನಂದವೀವುದು
ಭವಜನಿತ ದುಃಖಗಳ ಕಳೆವುದು
ವಿವಿಧ ಭೋಗಗಳಿಹ ಪರಂಗಳಲಿತ್ತು ಸಲಹುವುದು
ಭುವನ ಪಾವನವೆನಿಪ ಲಕುಮೀ
ಧವನ ಮಂಗಳ ಕಥೆಯು ಪರಮೋ
ತ್ಸವವ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ ೧

ಮಳೆಯು ನೀರೋಣಿಯಲಿ ಹರಿಯಲು
ಬಳಸರೂರೊಳಗಿದ್ದ ಜನರಾ
ಮಲವು ಹೆದ್ದೊರೆಗೂಡೆ ಮಜ್ಜನ ಪಾನ ಗೈವವರು
ಕಲುಷ ವಚನಗಳಾದರಿವು ಬಾಂ
ಬೊಳೆಯ ಹೆತ್ತನ ಪಾದ ಮಹಿಮಾ
ಜಲಧಿ ಪೊಕ್ಕುದರಿಂದೆ ಮಾಣ್ಬರೇ ಮಹೀಸುರರು ೨

ಶ್ರುತಿತತಿಗಳಭಿಮಾನಿ ಲಕುಮೀ
ಸ್ತುತಿಗಳಿಗೆ ಗೋಚರಿಸದಪ್ರತಿ
ಹತ ಮಹೈಶ್ವರ್ಯಾದ್ಯಖಿಳ ಸದ್ಗುಣ ಗಣಾಂಬೋಧಿ
ಪ್ರತಿದಿವಸ ತನ್ನಂಘ್ರಿ ಸೇವಾ
ರತ ಮಹಾತ್ಮರು ಮಾಡುತಿಹ ಸಂ
ಸ್ತುತಿಗೆ ವಶನಾಗುವನಿವನ ಕಾರುಣ್ಯಕೇನೆಂಬೆ ೩

ಮನವಚನಕತಿದೂರ ನೆನೆವರ
ನನುಸರಿಸಿ ತಿರುಗುವನು ಜಾಹ್ನವಿ
ಜನಕ ಜನರೊಳಗಿದ್ದು ಜನಿಸುವ ಜಗದುದರ ತಾನು
ಘನಮಹಿಮ ಗಾಂಗೇಯಸುತ ಗಾ
ಯನವ ಕೇಳುತ ಗಗನಚರ ವಾ
ಹನ ದಿವೌಕಸರೊಡನೆ ತಿರುಗುವ ಮನೆ ಮನೆಗಳಲ್ಲಿ ೪

ಮಲಗಿ ಪರಮಾದರದಿ ಪಾಡಲು
ಕುಳಿತು ಕೇಳುವ ಕುಳಿತು ಪಾಡಲು
ನಿಲುವ ನಿಂತರ ನಲಿವ ನಲಿದರೆ ಒಲಿವೆ ನಿಮಗೆಂಬ
ಸುಲಭನೋ ಹರಿ ತನ್ನವರನರ
ಘಳಿಗೆ ಬಿಟ್ಟಗಲನು ರಮಾಧವ
ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ ೫

ಮನದೊಳಗೆ ತಾನಿಪ್ಪ ಮನವೆಂ
ದೆನಿಸಿಕೊಂಬನು ಮನದ ವೃತ್ತಿಗ
ಳನುಸರಿಸಿ ಭೋಗಗಳ ನೀವನು ತ್ರಿವಿಧ ಚೇತನಕೆ
ಮನವನಿತ್ತರೆ ತನ್ನ ನೀವನು
ತನುವದಂಡಿಸಿ ದಿನದಿನದಿ ಸಾ
ಧನವ ಮಾಳ್ಪರಿಗಿತ್ತಪನು ಸ್ವರ್ಗಾದಿ ಭೋಗಗಳ ೬

ಪರಮ ಸತ್ಪುರುಷಾರ್ಥ ರೂಪನು
ಹರಿಯೆ ಲೋಕಕೆಯೆಂದು ಪರಮಾ
ದರದಿ ಸದುಪಾಸನೆಯ ಗೈವರಿಗಿತ್ತಪನು ತನ್ನ
ಮರೆದು ಧರ್ಮಾರ್ಥಗಳ ಕಾಮಿಸು
ವರಿಗೆ ನಗುತತಿ ಶೀಘ್ರದಿಂದಲಿ
ಸುರಪತನಯ ಸುಯೋಧನರ್ಗಿತ್ತಂತೆ ಕೊಡುತಿಪ್ಪ ೭

ಜಗವನೆಲ್ಲವ ನಿರ್ಮಿಸುವ ನಾ
ಲ್ಮೊಗನೊಳಗೆ ತಾನಿದ್ದು ಸಲಹುವ
ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳ
ಸ್ವಗತ ಭೇದ ವಿವರ್ಜಿತನು ಸ
ರ್ವಗ ಸದಾನಂದೈಕದೇಹನು
ಬಗೆಬಗೆಯ ನಾಮದಲಿ ಕರೆಸುವ ಭಕುತರನು ಪೊರೆವ ೮

ಒಬ್ಬನಲಿ ನಿಂತಾಡುವನು ಮ
ತ್ತೊಬ್ಬನಲಿ ನೋಡುವನು ಬೇಡುವ
ನೊಬ್ಬನಲಿ ನೀಡುವನು ಮಾತಾಡುವನು ಪರಗಾಗಿ
ಅಬ್ಬರದ ಪೆಟ್ಟಿನಸಿವ ಮ
ತ್ತೊಬ್ಬರನು ರಕ್ಷಿಸನು ಲೋಕದೊ
ಳೊಬ್ಬನಂ ತಾ ಬಾಧ್ಯ ಬಾಧಕನಾಹ ಸ್ಫೂರ್ತಿತ ೯

ಶರಣಜನಮಂದಾರ ಶಾಶ್ವತ
ಕರುಣಿ ಕಮಲಾಕಾಂತ ಕಾಮದ
ಪರಮ ಪಾವನತರ ಸುಮಂಗಳಚರಿತ ಪಾರ್ಥನುತ
ನಿರುಪಮಾನಂದಾತ್ಮ ನಿರ್ಗತ
ದುರಿತ ದೇವವರೇಣ್ಯನೆಂದಾ
ದರದಿ ಕರೆಯಲು ಬಂದೊದಗುವನು ತನ್ನವರ ಬಳಿಗೆ ೧೦

ಜನನಿಯನು ಕಾಣದಿಹ ಬಾಲಕ
ನೆನೆನೆನೆದು ಹಲುಬುತಿರೆ ಕತ್ತಲ
ಮನೆಯೊಳಡಗಿದ್ದವನ ನೋಡುತ ನಗುತ ಹರುಷದಲಿ
ತನಯನಂ ಬಿಗಿದಪ್ಪಿ ರಂಬಿಸಿ
ಕನಲಿಕೆಯ ಕಳೆವಂತೆ ಮಧುಸೂ
ದನನು ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು ೧೧

ಇಟ್ಟಿಕಲ್ಲನು ಭಕುತಿಯಿಂದಲಿ
ಕೊಟ್ಟ ಭಕುತಗೆ ಮೆಚ್ಚಿ ತನ್ನನೆ
ಕೊಟ್ಟ ಬಡಬ್ರಾಹ್ಮಣನ ಒಪ್ಪಿಡಿಯವಲಿಗಖಿಳಾರ್ಥ
ಕೆಟ್ಟ ಮಾತುಗಳೆಂದ ಚೈದ್ಯನ
ಪೊಟ್ಟೆಯೊಳಗಿಂಬಿಟ್ಟ, ಬಾಣದ
ಲಿಟ್ಟ ಭೀಷ್ಮನ ಅವಗುಣಗಳೆಣಿಸಿದನೆ ಕರುಣಾಳು ೧೨

ಧನವ ಸಂರಕ್ಷಿಸುವ ಫಣಿ ತಾ
ನುಣವೆ ಮತ್ತೊಬ್ಬರಿಗ ಕೊಡದನು
ದಿನದಿ ನೋಡುತ ಸುಖಿಸುವಂದದಿ ಲಕುಮಿವಲ್ಲಭನು
ಪ್ರಣತರನ ಕಾಯ್ದಿಹನು ನಿಷ್ಕಾ
ಮನದಿ ನಿತ್ಯಾನಂದಮಯ ತಾ
ಜನರ ಸೇವೆಯನೊಲ್ಲ ನಿಸ್ಪೃಹನಲ್ಲ ಲೋಕದಲ್ಲಿ ೧೩

ಬಾಲಕನ ಕಲಭಾಷೆ ಜನನಿಯು
ಕೇಳಿ ಸುಖಪಡುವಂತೆ ಲಕುಮಿ
ಲೋಲ ಭಕ್ತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು
ತಾಳ ತನ್ನವರಲ್ಲಿ ಮಾಡಿದ
ಹೇಳನವ ಹೆಚ್ಚೈವ ವಿದುರನ
ಆಲಯದಿ ಪಾಲುಂಡು ಕುರುಪನ ಮಾನವನೆ ಕೊಂಡ ೧೪

ಸ್ಮರಿಸುವವರಪರಾಧಗಳ ತಾ
ಸ್ಮರಿಸ ಸಕಲೇಷ್ಟ ಪ್ರದಾಯಕ
ಮರಳಿ ತನಗರ್ಪಿಸಲು ಕೊಟ್ಟುದನಂತಮಡಿ ಮಾಡಿ
ಪರಿಪರಿಯಲಿಂದುಣಿಸಿ ಸುಖ ಸಾ
ಗರದ ಲೋಲ್ಯಾಡಿಸುವ ಮಂಗಳ
ಚರಿತ ಚಿನ್ಮಯಗಾತ್ರ ಲೋಕಪವಿತ್ರ ಸುಚರಿತ್ರ ೧೫

ಅಂಗುಟಾಗ್ರದಿ ಜನಿಸಿದಮರ ತ
ರಂಗಿಣಿಯು ಲೋಕತ್ರಯಗಳಘ
ಹಿಂಗಿಸುವಳವ್ಯಾಕೃತಾಕಾಶಾಂತ ವ್ಯಾಪಿಸಿದ
ಇಂಗಡಲ ಮಗಳೊಡೆಯನಂಗೋ
ಪಾಂಗಗಳಲಿಪ್ಪಮಲನಂತ ಸು
ಮಂಗಳಪ್ರದನಾಮ ಪಾವನವಾಳ್ಪುದೇನರಿದು ೨೦

ಕಾಮಧೇನು ಸುಕಲ್ಪತರು ಚಿಂ
ತಾಮಣಿಗಳಮರೇಂದ್ರ ಲೋಕದಿ
ಕಾಮಿತಾರ್ಥಗಳೀವುವಲ್ಲದೆ ಸೇವೆಮಾಳ್ಪರಿಗೆ
ಶ್ರೀಮುಕುಂದನ ಪರಮಮಂಗಳ
ನಾಮ ನರಕಸ್ಥರನು ಸಲಹಿತು
ಪಾಮರರ ಪಂಡಿತರೆನಿಸಿ ಪುರುಷಾರ್ಥ ಕೊಡುತಿಹುದು ೨೧

ಮನದೊಳಗೆ ಸುಂದರ ಪದಾರ್ಥವ
ನೆನೆದು ಕೊಡೆ ಕೈಕೊಂಡು ಬಲು ಸೂ
ತನ ಸುಶೋಭಿತ ಗಂಧ ಸುರಸೋಪೇತ ಫಲರಾಶಿ
ದ್ಯುನದಿನಿವಹಗಳಂತೆ ಕೊಟ್ಟವ
ರನು ಸದಾ ಸಂತೈಸುವನು ಸ
ದ್ಗುಣವ ಕದ್ದವರಘವ ಕದಿವನು ಅನಘನೆಂದೆನಿಸಿ ೨೨

ಚೇತನಾಚೇತನ ವಿಲಕ್ಷಣ
ನೂತನ ಪದಾರ್ಥಗಳೊಳಗೆ ಬಲು
ನೂತನತಿ ಸುಂದರಕೆ ಸುಂದರ ರಸಕೆ ರಸರೂಪ
ಜಾತರೂಪೋದರ ಭವಾದ್ಯರೊ
ಳಾತತಪ್ರತಿಮಪ್ರಭಾವ ಧ
ರಾತಳದೊಳೆನ್ನೊಡನೆ ಯಾಡುತಲಿಪ್ಪ ನಮ್ಮಪ್ಪ ೨೩

ತಂದೆತಾಯ್ಗಳು ತಮ್ಮ ಶಿಶುವಿಗೆ
ಬಂದ ಭಯಗಳ ಪರಿಹರಿಸಿ ನಿಜ
ಮಂದಿರದಿ ಬೇಡಿದುದ ನಿತ್ತಾದರಿಸು ವಂದದಲಿ
ಹಿಂದೆ ಮುಂದೆಡಬಲದಿ ಒಳಹೊರ
ಗಿಂದಿರೇಶನು ತನ್ನವರ ನೆಂ
ದೆಂದು ಸಲಹುವನಾಗಸದ ವ್ಯೋಲೆತ್ತ ನೋಡಿವರು ೨೪

ಒಡಲ ನೆಳಲಂದದಲಿ ಹರಿ ನ
ಮ್ಮೊಡನೆ ತಿರುಗುವ ಒಂದರಕ್ಷಣ
ಬಿಡದೆ ಜೆಂಬಲವಾಗಿ ಭಕ್ತಾಧೀನನೆಂದೆನಿಸಿ
ತಡೆವ ದುರಿತೌಘಗಳ ಕಾಮದ
ಕೊಡುವಸಕಲೇಷ್ಟಗಳ ಸಂತತ
ನಡೆವ ನಮ್ಮಂದದಲಿ ನವಸುವಿಶೇಷ ಸನ್ಮಹಿನು ೨೫

ಬಿಟ್ಟವರ ಭವಪಾರದಿಂದಲಿ
ಕಟ್ಟುವನು ಬಹು ಕಠಿಣನಿವ ಶಿ
ಷ್ಟೇಷ್ಟನೆಂದರಿತನವರತ ಸದ್ಭಕ್ತಿ ಪಾರದಲಿ
ಕಟ್ಟುವರ ಭವಕಟ್ಟು ಬಿಡಿಸುವ
ಸಿಟ್ಟನವ ನಿವನಲ್ಲ ಕಾಮದ
ಕೊಟ್ಟು ಕಾವನು ಸಕಲ ಸೌಖ್ಯವ ನಿಹಪರಂಗಳಲಿ ೨೬

ಕಣ್ಣಿಗೆವೆಯಂದದಲಿ ಕೈ ಮೈ
ತಿಣ್ಣಿಗೊದಗುವ ತೆರದಿ ಪಲ್ಗಳು
ಪಣ್ಣು ಫಲಗಳನಗಿದು ಜಿಹ್ವೆಗೆ ರಸವ ನೀವಂತೆ
ಪುಣ್ಯ ಫಲವೀವಂದದಲಿ ನುಡಿ
ವೆಣ್ಣಿನಾಣ್ಣಾಂಡದೊಳು ಲಕ್ಷ್ಮಣ
ನಣ್ಣನೊದಗುವ ಭಕ್ತರವಸರ ಕಮರಗಣ ಸಹಿತ ೨೭

ಕೊಟ್ಟುದನು ಕೈಕೊಂಬ ರಕ್ಷಣ
ಬಿಟ್ಟಗಲ ತನ್ನವರ ದುರಿತಗ
ಳಟ್ಟುವನು ದೂರದಲಿ ದುರಿತಾರಣ್ಯ ಪಾವಕನು
ಬೆಟ್ಟ ಬೆನ್ನಲಿ ಪೊರಿಸಿದನವರೊಳು
ಸಿಟ್ಟು ಮಾಡಿದನೇನೊ ಹರಿ ಕಂ
ಗೆಟ್ಟಸುರರಿಗೆ ಸುಧೆಯನುಣಿಸಿದ ಮುರಿದನಹಿತರನ. ೨೮

ಖೇದ ಮೋದ ಜಯಾಪಜಯ ಮೊದ
ಲಾದ ದೋಷಗಳಿಲ್ಲ ಚಿನ್ಮಯ
ಸಾದರದಿ ತನ್ನಂಘ್ರಿ ಕಮಲವ ನಂಬಿ ತುತಿಸುವರ
ಕಾದುಕೊಂಡಿಹ ಪರಮ ಕರುಣ ಮ
ಹೋದಧಿಯು ತನ್ನವರು ಮಾಡ್ದಪ
ರಾಧಗಳ ನೋಡದಲೆ ಸಲಹುವ ಸರ್ವ ಕಾಮದನು ೨೯

ಮೀನ ಕೂರ್ಮವರಾಹ ನರ ಪಂ
ಚಾನ ನಾತುಳ ಶೌರ್ಯ ವಾಮನ
ರೇಣುಕಾತ್ಮಜ ರಾವಣಾದಿ ನಿಶಾಚರ ಧ್ವಂಸಿ
ಧೇನುಕಾಸುರ ಮಥನ ತ್ರಿಪುರವ
ಹಾನಿಗೈಸಿದ ನಿಪುಣ ಕಲಿಮುಖ
ದಾನವರ ಸಂಹರಿಸಿ ಧರ್ಮಾದಿ ಕಾಯ್ದ ಸುಜನರನು ೩೦

ಶ್ರೀ ಮನೋರಮ ಶಮಲ ವರ್ಜಿತ
ಕಾಮಿತಪ್ರದ ಕೈರವದಳ
ಶ್ಯಾಮ ಶಬಲ ಶರಣ್ಯ ಶಾಶ್ವತ ಶರ್ಕರಾಕ್ಷಸಖ
ಸಾಮಸನ್ನುತ ಸಕಲ ಗುಣಗಣ
ಧಾಮ ಶ್ರೀಜಗನ್ನಾಥ ವಿಠ್ಠಲ
ಈ ಮಹಿಯೊಳವತರಿಸಿ ಸಲಹಿದ ಸಕಲ ಸುಜನರನು ೩೧

ಅಂತು ಸಂಧಿ ೨ಕ್ಕೆ ಪದಗಳು ೪೪ಕ್ಕೆ ಮಂಗಳಂ.

ಶ್ರೀಕೃಷ್ಣಾರ್ಪಣಮಸ್ತು

## ೩ 'ವ್ಯಾಪ್ತಿ ಸಂಧಿ'

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಪುರುಷ ರೂಪತ್ರಯ ಪುರಾತನ
ಪುರುಷ ಪುರುಷೋತ್ತಮ ಕ್ಷರಾಕ್ಷರ
ಪುರುಷ ಪೂಜಿತಪಾದ ಪೂರ್ಣಾನಂದ ಜ್ಞಾನಮಯ
ಪುರುಷಸೂಕ್ತ ಸುಮೇಯ ತತ್ತ
ತ್ಪುರುಷ ಹೃತ್ಪುಷ್ಕರನಿಲಯ ಮಹ
ಪುರುಷಜಾಂಡಾಂತರದಿ ಬಹಿರದಿ ವ್ಯಾಪ್ತ ನಿರ್ಲಿಪ್ತ ೧

ಸ್ತ್ರೀ ನಪುಂಸಕ ಪುರುಷ ಭೂ ಸಲಿ
ಲಾನಲಾನಿಲ ಗಗನ ಮನ ಶಶಿ
ಭಾನು ಕಾಲ ಗುಣ ಪ್ರಕೃತಿಯೊಳಗೊಂದು ತಾನಲ್ಲ
ಏನು ಇವನ ಮಹಾಮಹಿಮೆ ಕಡೆ
ಗಾಣರಜಭವ ಶಕ್ರಮುಖರು ನಿ
ಧಾನಿಸಲು ಮಾನವರಿಗಳವಡುವುದೆ ವಿಚಾರಿಸಲು ೨

ಗಂಧ ರಸ ರೂಪ ಸ್ಪರ್ಶ ಶ
ಬ್ದೊಂದು ತಾನಲ್ಲದರದರ ಪೆಸ
ರಿಂದೆ ಕರಸುತ ಜೀವರಿಗೆ ತರ್ಪಕನು ತಾನಾಗಿ
ಪೊಂದಿಕೊಂಡಿಹ ಪರಮ ಕರುಣಾ
ಸಿಂಧು ಶಾಶ್ವತ ಮನವೆ ಮೊದಲಾ
ದಿಂದ್ರಿಯಗಳೊಳಗಿದ್ದು ಭೋಗಿಸುತಿಹನು ವಿಷಯಗಳ ೩

ಶ್ರವಣ ನಯನ ಘ್ರಾಣ ತ್ವಗ್ರಸ
ಸಿವ್ರಗಳಲಿ ವಾಕ್ಪಾಣಿ ಪಾದಾ
ದ್ಯವಯವಗಳಲಿ ತದ್ಗುಣಗಳಲಿ ತತ್ಕೃತಿಗಳೊಳಗೆ
ಪ್ರವಿತತನು ತಾನಾಗಿ ಕೃತಿಪತಿ
ವಿವಿಧ ಕರ್ಮವ ಮಾಡಿ ಮಾಡಿಸಿ
ಭವಕೆ ಕಾರಣನಾಗಿ ತಿರುಗಿಸುತಿಹನು ತಿಳಿಸದಲೆ ೪

ಗುಣಿ ಗುಣಗಳೊಳಗಿದ್ದು ಗುಣಿ ಗುಣ
ನೆನಿಸುವನು ಗುಣ ಬದ್ಧನಾಗದೆ
ಗುಣಜ ಪುಣ್ಯಾಪುಣ್ಯ ಫಲ ಬ್ರಹ್ಮಾದಿ ಚೇತನಕೆ
ಉಣಿಸುತವರೊಳಗಿದ್ದು ವೃಜಿನಾ
ರ್ದನ ಚಿದಾನಂದೈಕದೇಹನು
ಕೊನೆಗೆ ಸಚರಾಚರ ಜಗದ್ಬುಕುಯೆನಿಪ ನವ್ಯಯನು ೫

ವಿದ್ಯತಾನಂದೆನಿಸಿಕೊಂಬನಿ
ರುದ್ಧದೇವನು ಸರ್ವ ಜೀವರ
ಬುದ್ಧಿಯೊಳು ನೆಲೆಸಿದ್ದು ಕೃತಿಪತಿ ಬುದ್ಧಿಯೆನಿಸುವನು
ಶುದ್ಧಯೆನಿಸುವ ಸಂಕರುಷಣ ಪ್ರ
ಸಿದ್ಧನಾಮಕ ವಾಸುದೇವನ
ಪದ್ಯರೂಪ ಚತುಷ್ಟಯಗಳರಿತವನೆ ಕೋವಿದನು ೬

ತನು ಚತುಷ್ಟಯಗಳೊಳು ನಾರಾ
ಯಣನು ಹೃತ್ಕಮಲಾಖ್ಯ ಸಿಂಹಾ
ಸನದೊಳನಿರುದ್ಧಾದಿ ರೂಪಗಳಿಂದ ಶೋಭಿಸುತ
ತನಗೆ ತಾನೇ ಸೇವ್ಯ ಸೇವಕ
ನೆನಿಸಿ ಸೇವಾಸಕ್ತ ಸುರರೊಳ
ಗನವರತ ನೆಲೆಸಿದ್ದು ಸೇವೆಯಕೊಂಬನವರಂತೆ ೭

ಜಾಗರ ಸ್ವಪ್ನಂಗಳೊಳು ವರ
ಭೋಗಿಶಯನ ಬಹುಪ್ರಕಾರ ವಿ
ಭಾಗಗೈಸಿ ನಿರಂತ ಜೀವರ ಚಿಚ್ಛರೀರವನು
ಭೋಗಿಸಿತ್ತು ಸುಷುಪ್ತಿಕಾಲದಿ
ಸಾಗರವ ನದಿ ಕೂಡುವಂತೆ ವಿ
ಯೋಗರಹಿತನು ಅಂಶಗಳನೇಕತ್ರಯ್ದಿಸುವ ೮

ಭಾರ್ಯರಿಂದೊಡಗೂಡಿ ಕಾರಣ
ಕಾರ್ಯವಸ್ತುಗಳಲ್ಲಿ ಪ್ರೇರಣ
ಪ್ರೇರ್ಯರೂಪಗಳಿಂದ ಪಟತಂತುಗಳವೋಲಿದ್ದು
ಸೂರ್ಯ ಕಿರಣಗಳಂತೆ ತನ್ನಯ
ವೀರ್ಯದಿಂದಲಿ ಕೊಡುತಕೊಳುತಿಹ
ನಾರ್ಯರಿಗೆ ಈತನ ವಿಹಾರವು ಗೋಚರಿಪುದೇನೊ ೯

ಜನಕ ತನ್ನಾತ್ಮಜಗೆ ವರ ಭೂ
ಷಣ ದುಕೂಲವ ತೊಡಿಸಿ ತಾ ವಂ
ದನೆಯ ಕೈಕೊಳುತವನ ಹರಸುತ ಹರುಷಬಡುವಂತ
ವನರುಹೇಕ್ಷಣ ಪೂಜ್ಯಪೂಜಕ
ನೆನಿಸಿ ಪೂಜಾಸಾಧನ ಪದಾ
ರ್ಥವನು ತನಗೆ ತಾನಾಗಿ ಫಲಗಳನೀವ ಭಜಕರಿಗ ೧೦

ತಂದೆ ಬಹು ಸಂಭ್ರಮದಿ ತನ್ನಯ
ಬಂಧುಬಳಗವ ನೆರಹಿ ಮದುವೆಯ
ನಂದನಗೆ ತಾಮಾಡಿ ಮನೆಯೊಳಗಿಡುವ ತರನಂತೆ
ಇಂದಿರಾಧವ ತನ್ನ ಇಚ್ಛೆಗ
ಳಿಂದ ಗುಣಗಳ ಚೇತನಕೆ ಸಂ
ಬಂಧಗೈಸಿ ಸುಖಾಸುಖಾತ್ಮಕ ಸಂಸೃತಿಯಲಿಡುವ ೧೧

ತೃಣಕೃತಾಲಯದೊಳಗೆ ಪೊಗೆ ಸಂ
ದಣಿಸಿ ಪ್ರತಿ ಛಿದ್ರದಲಿ ಪೊರಮ
ಟ್ಟನಳನಿರವನು ತೋರಿ ತೋರದಲಿಪ್ಪ ತೆರನಂತೆ
ವನಜಜಾಂಡದೊಳಖಿಳ ಜೀವರ
ತನುವಿನೊಳ ಹೊರಗಿದ್ದು ಕಾಣಿಸ
ದನಿಮಿಷೇಶನು ಸಕಲ ಕರ್ಮವ ಮಾಳ್ಪನವರಂತೆ ೧೨

ಪಾದಪಗಳಡಿಗೆರೆಯೆ ಸಲಿಲವು
ತೋದು ಕೊಂಬೆಗಳುಬ್ಬಿ ಪುಷ್ಪ
ಸ್ವಾದು ಫಲವೀವಂದದಲಿ ಸರ್ವೇಶ್ವರನು ಜನರಾ
ರಾಧನೆಯ ಕೈಕೊಂಡು ಬ್ರಹ್ಮ ಭ
ವಾದಿಗಳ ನಾಮದಲಿ ಫಲ ವಿ
ತ್ತಾದರಿಸುವನು ತನ್ನ ಮಹಿಮೆಯ ತೋರಗೊಡ ಜಗಕೆ ೧೩

ಶ್ರುತಿ ತತಿಗಳಿಗೆ ಗೋಚರಿಸದ
ಪ್ರತಿಮಜಾನಂದಾತ್ಮ ನಚ್ಯುತ
ವಿತತ ವಿಶ್ವಾಧಾರ ವಿದ್ಯಾಧೀಶ ವಿಧಿಜನಕ
ಪ್ರತಿದಿವಸ ಚೇತನರೊಳಗ ಪ್ರಾ
ಕೃತ ಪುರುಷನಂದದಲಿ ಸಂಚರಿ
ಸುತ ನಿಯಮ್ಯ ನಿಯಾಮಕನು ತಾನಾಗಿ ಸಂತೈಪ ೧೪

ಮನ ವಿಷಯದೊಳಗಿರಿಸಿ ವಿಷಯವ
ಮನದೊಳಗೆ ನೆಲೆಗೊಳಿಸಿ ಬಲು ನೂ
ತನವು ಸುಸಮೀಚೀನ ವಿದುಪಾದೇಯ ವೆಂದರುಪಿ
ಕನಸಿಲಾದರು ತನ್ನ ಪಾದದ
ನೆನೆವನೀಯದೆ ಸರ್ವರೊಳಗಿ
ದ್ದನುಭವಿಸುವನು ಸ್ಥೂಲ ವಿಷಯವ ವಿಶ್ವನೆಂದೆನಿಸಿ ೧೫

ತೋದುಕನು ತಾನಾಗಿ ಮನ ಮೊದ
ಲಾದ ಕರಣದೊಳಿದ್ದು ವಿಷಯವ
ನೈದವನು ನಿಜಪೂರ್ಣ ಸುಖಮಯ ಗ್ರಾಹ್ಯ ಗ್ರಾಹಕನು
ವೇದವೇದ್ಯನು ತಿಳಿಯದವನೋ
ಪಾದಿ ಭುಂಜಿಸುತೆಲ್ಲರೊಳಗಾ
ಹ್ಲಾದ ಬಡುವನು ಭಕ್ತವತ್ಸಲ ಭಾಗ್ಯ ಸಂಪನ್ನ ೧೬

ನಿತ್ಯ ನಿಗಮಾತೀತ ನಿರ್ಗುಣ
ಭೃತ್ಯವತ್ಸಲ ಭಯ ವಿನಾಶನ
ಸತ್ಯಕಾಮ ಶರಣ್ಯ ಶ್ಯಾಮಲ ಕೋಮಲಾಂಗ ಸುಖಿ
ಮತ್ತನಂದದಿ ಮರ್ತ್ಯರೊಳಹೊರ
ಗೆತ್ತ ನೋಡಲು ಸುತ್ತಲಿಪ್ಪನು
ಅತ್ಯಧಿಕ ಸಂತೃಪ್ತ ತ್ರಿಜಗದ್ವ್ಯಾಪ್ತ ಪರಮಾಪ್ತ ೧೭

ಪವಿ ಹರಿನ್ಮಣಿ ವಿದ್ರುಮದ ಸ
ಚ್ಛವಿಗಳಂದದಿ ರಾಜಿಸುತ ಮಾ
ಧವ ನಿರಂತರ ದೇವ ದಾನವ ಮಾನವರೊಳಿದ್ದು
ತ್ರಿವಿಧ ಗುಣ ಕರ್ಮ ಸ್ವಭಾವವ
ಪವನಮುಖ ದೇವಾಂತರಾತ್ಮಕ
ದಿವಸ ದಿವಸದಿ ವ್ಯಕ್ತಮಾಡುತಲವರೊಳಿದ್ದುಣಿಪ ೧೮

ಅಣು ಮಹತ್ತಿನಲಿಪ್ಪ ಘನ ಪರ
ಮಣುವಿನೊಳಗಡಗಿಸುವ ಸೂಕ್ಷ್ಮವ
ಮುಣುಗಿಸುವ ತೇಲಿಸುವ ಸ್ಥೂಲಗಳಪನ ಮಾಯವಿದು
ದನುಜ ರಕ್ಕಸರೆಲ್ಲರಿವನೊಳು
ಮುನಿದು ಮಾಡುವುದೇನು ಲೂಖಲ
ವನಕೆಗಳು ಧಾನ್ಯಗಳ ಹಣಿವಂದದಲಿ ಸಂಹರಿಪ ೧೯

ದೇವ ಮಾನವ ದಾನವರು ಎಂ
ದೀ ವಿಧದಲಾವಾಗಲಿಪ್ಪರು
ಮೂವರೊಳಗಿವಗಿಲ್ಲ ಸ್ನೇಹೋಂದಾಸಿನ ದ್ವೇಷ
ಜೀವರಧಿಕಾರಾನುಸಾರದ
ಲೀವ ಸುಖ ಸಂಸಾರ ದುಃಖವ
ತಾವುಣದ ಲವರವರಿಗುಣಿಸುವ ನಿರ್ಗತಾಶನನು ೨೦

ಎಲ್ಲಿ ಕೇಳಿದರಲ್ಲಿ ನೋಡಿದ
ರಲ್ಲಿ ಬೇಡಿದರಲ್ಲಿ ನೀಡಿದ
ರಲ್ಲಿ ಓಡಿದರಲ್ಲಿ ಆಡಿದರಲ್ಲಿ ಇರುತಿಹನು
ಬಲ್ಲದರಿಗತಿ ಬಲ್ಲಿದನು ಸರಿ
ಯಿಲ್ಲ ಇವಗಾವಲ್ಲಿ ನೋಡಲು
ಖುಲ್ಲ ಮಾನವರೊಲ್ಲ ನಪ್ರತಿವ ಲ್ಲ ಜಗಕಲ್ಲ ೨೧

ತಪ್ತಲೋಹವು ನೋಳ್ಪ ಜನರಿಗೆ
ಸಪ್ತಜಿಹ್ವನ ತೆರದಿ ತೋರ್ಪುದು
ಲುಪ್ತಪಾವಕ ಲೋಹ ಕಾಂಬುದು ಪೂರ್ವದೋಷಾದಿ
ಸಪ್ತವಾಹನ ನಿಖಿಳ ಜನರೊಳು
ವ್ಯಾಪ್ತನಾದುದರಿಂದ ಸರ್ವರು
ಆಪ್ತರಾಗಿಹರೆಲ್ಲಕಾಲದಿ ಹಿತವ ಕೈಕೊಂಡು ೨೨

ವಾರಿದನು ಮಳೆಗರೆಯೆ ಬೆಳೆದಿಹ
ಭೂರುಹಂಗಳ ಚಿತ್ರ ಫಲ ರಸ
ಬೇರೆ ಬೇರಿಪ್ಪಂತೆ ಬಹುವಿಧ ಜೀವರೊಳಗಿದ್ದು
ಮಾರಮಣ ನವರವರ ಯೋಗ್ಯತೆ
ವಿಚಾರದಲಿ ಗುಣಕರ್ಮಗಳನನು
ಸಾರ ನಡೆಸುವ ದೇವನಿಗೆ ವೈಷಮ್ಯವೆಲ್ಲಿಹುದೊ ೨೩

ವಾರಿಜಾಪ್ತನ ಕಿರಣ ಮಣಿಗಳ
ಸೇರಿ ತತ್ತದ್ವರ್ಣಗಳನು ವಿ
ಕಾರಗೈಸದೆ ನೋಳ್ಪರಿಗೆ ಥಳಥಳಿಸುವಂದದಲಿ
ಮಾರರಮಣ ಲೋಕತ್ರಯದೊಳಿಹ
ಮೂರು ವಿಧ ಜೀವರೊಳಗಿದ್ದು ವಿ
ಹಾರ ಮಾಡುವನವರ ಯೋಗ್ಯತೆ ಕರ್ಮವನುಸರಿಸಿ ೨೪

ಜಲವನಪಹರಿಸುವ ಗಳಿಗೆ ಬ
ಟ್ಟಲನುಳಿದು ಪೃಗಂಟೆ ಕೈ ಪಿಡಿ
ದೆಳದು ಹೊಡೆವಂದದಲಿ ಸಂತತ ಕರ್ತ ತಾನಾಗಿ
ಹಲಧರಾನುಜ ಪುಣ್ಯ ಪಾಪದ
ಫಲಗಳನು ದೇವಾಸುರರ ಗಣ
ದೊಳು ವಿಭಾಗವ ಮಾಡಿ ಉಣಿಸುತ ಸಾಕ್ಷಿಯಾಗಿಪ್ಪ ೨೫

ಪೊಂದಿಕೊಂಡಿಹ ಸರ್ವರೊಳು ಸಂ
ಬಂಧವಾಗದೆ ಸಕಲ ಕರ್ಮವ
ನಂದವಲಿ ತಾಮಾಡಿ ಮಾಡಿಸಿ ತತ್ಫಲಗಳುಣದೆ
ಕುಂದವಲಿ ಅಣು ಮಹತೆನಿಪ ಘಟ
ಮಂದಿರದಿ ಸರ್ವತ್ರ ತುಂಬಿಹ
ಬಾಂದಳದ ತೆರನಂತೆ ಇರುತಿಪ್ಪನು ರಮಾರಮಣ ೨೬

ಕಾದಕಬ್ಬಿಣ ಹಿಡಿದು ಬಡಿಯಲು
ವೇದನವು ಲೋಹಗಳಿಗಲ್ಲದ
ಲಾದುದೇನೈಯನಳಗಾ ವ್ಯಥೆಯೇನಮಾಡಿದರು
ಆದಿದೇವನು ಸರ್ವ ಜೀವರ
ಕಾದುಕೊಂಡಿಹನೊಳಹೊರಗೆ ದುಃ
ಖಾದಿಗಳು ಸಂಬಂಧವಾಗುವವೇನೊ ಚಿನ್ಮಯಗೆ ೨೭

ಮಳಲ ಮನೆಗಳ ಮಾಡಿ ಮಕ್ಕಳು
ಕೆಲವು ಕಾಲದಲಾಡಿ ಮೋದದಿ
ತುಳಿದು ಕೆಡಿಸುವ ತೆರದಿ ಲಕುಮಿರಮಣ ಲೋಕಗಳ
ಹಲವು ಬಗೆಯಲಿ ನಿರ್ಮಿಸುವ ನಿ
ಶ್ಚಲನು ತಾನಾಗಿದ್ದು ಸಲಹುವ
ನೆಲರುಣಿಯವೋಲ್ ನುಂಗುವಗೆ ಎಲ್ಲಿಯದೊ ಸುಖದುಃಖ ೧೮

ವೇಷ ಭಾಷೆಗಳಿಂದ ಜನರ ಪ್ರ
ಮೋಷಗೈಸುವ ನಟ ಪುರುಷನೋಲ್
ದೋಷದೂರನು ಲೋಕದೊಳು ಬಹು ರೂಪ ಮಾತಿನಲಿ
ತೋಷಿಸುವ ನವರವರ ಮನದಭಿ
ಲಾಷೆಗಳ ಪೂರೈಸುತನುದಿನ
ಪೋಷಿಸುವ ಪೂತಾತ್ಮ ಪೂರ್ಣಾನಂದ ಜ್ಞಾನಮಯ ೧೯

ಅಧಮ ಮಾನವ ನೋರ್ವ ಮಂತ್ರೌ
ಷಧಗಳನು ತಾನರಿತು ಪಾವಕ
ಉದಕಗಳ ಸಂಬಂಧವಿಲ್ಲದಲಿಪ್ಪನದರೊಳಗೆ
ಪದುಮಜಾಂಡೋದರನು ಸರ್ವರ
ಹೃದಯದೊಳಗಿರ ಕಾಲಗುಣ ಕ
ರ್ಮದ ಕಲುಷ ಸಂಬಂಧವಾಗುವುದೇ ನಿರಂಜನಗೆ ೨೦

ಒಂದುಗುಣದೊಳನಂತ ಗುಣಗಳು
ಒಂದು ರೂಪದೊಳಿಹವು ಲೋಕಗ
ಳೊಂದು ರೂಪದಿ ಧರಿಸಿ ತದ್ಗ ಪದಾರ್ಥದೊಳ ಹೊರಗೆ
ಬಾಂದಳದವೋಲಿದ್ದು ಬಹು ಪೆಸ
ರಿಂದ ಕರಸುತ ಪೂರ್ಣ ಜ್ಞಾನಾ
ನಂದಮಯ ಪರಿಪರಿ ವಿಹಾರವ ಮಾಡಿ ಮಾಡಿಸುವ ೨೧

ಎಲ್ಲರೊಳು ತಾಸಿಪ್ಪ ತನ್ನೊಳ
ಗಲ್ಲರನು ಧರಿಸಿಹನು ಅಪ್ರತಿ
ಮಲ್ಲ ಮನ್ಮಥಜನಕ ಜಗದಾದ್ಯಂತ ಮಧ್ಯಗಳ
ಬಲ್ಲ ಬಹುಗುಣ ಭರಿತ ದಾನವ
ವಲ್ಲಣ ಜಗನ್ನಾಥ ವಿಠ್ಠಲ
ನೊಲ್ಲನಾಲಿಸಿ ಕಂಭದಿಂದಲಿ ಬಂದ ಭಕ್ತನಿಗೆ ೩೨

ಅಂತು ಸಂಧಿ ೩ಕ್ಕೆ ಪದಗಳು ೭೬ಕ್ಕೆ ಮಂಗಳಂ

ಶ್ರೀಕೃಷ್ಣಾರ್ಪಣಮಸ್ತು



## ಸಂಧಿ ೪ 'ಭೋಜನ ರಸವಿಭಾಗ ಸಂಧಿ'

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ವನಜಜಾಂಡದೊಳುಳ್ಳಖಿಳ ಚೇ
ತನರು ಭುಂಜಿಸ ಚತುರವಿಧ ಭೋ
ಜನ ಪದಾರ್ಥದಿ ಚತುರ ವಿಧ ರಸ ರೂಪ ತಾನಾಗಿ
ಮನಕೆ ಬಂದುದ ನುಂಡುಣಿಸಿ ಸಂ
ಜನನಕುಪಚಯ ಕರಣ ಕಾನಂ
ದನಿಮಿಷರಿಗಾತ್ಮಪ್ರದರ್ಶನ ಸುಖವನೀವ ಹರಿ ೧

ಸೀಡದಂದದಲಿಪ್ಪ ಲಿಂಗಕೆ
ಷೋಡಶಾತ್ಮಕ ರಸವಿಭಾಗವ
ಮಾಡಿ ಷೋಡಶ ಕಳೆಗಳಿಗೆ ಉಪಚಯಗಳನೆ ಕೊಡುತ
ಕ್ರೋಡ ಎಪ್ಪತ್ತೆರಡು ಸಾವಿರ
ನಾಡಿಗತ ದೇವತೆಗಳೊಳಗಿ
ದ್ದಾಡುತಾನಂದಾತ್ಮ ಚರಿಸುವ ಲೋಕದೊಳು ತಾನು ೨

ವಾರಿವಾಚ್ಯನು ವಾರಿಯೊಳಗಿ
ದ್ದಾರು ರಸವೆಂದೆನಿಸಿ ಮೂವ
ತ್ತಾರು ಸಾವಿರ ಸ್ತ್ರೀ ಪುರುಷನಾಡಿಯೊಳು ತದ್ರೂಪ
ಧಾರಕನು ತಾನಾಗಿ ಸರ್ವ ಶ
ರೀರಿಗಳಲಿ ಮಹಶ್ಚರಾತ್ರಿ ವಿ
ಹಾರ ಮಾಳ್ಪನು ಬೃಹತಿಯೆಂಬ ಸುನಾಮದಿಂ ಕರೆಸಿ ೩

ಆರು ರಸ ಸತ್ವಾದಿ ಭೇದದ
ಲಾರು ಮೂರಾಗಿಹವು ಸಾರಾ
ಸಾರನೀತ ಪ್ರಚುರ ಖಂಡಾಖಂಡ ಚಿತ್ರ ಚುರ
ಈರಧಿಕ ಎಪ್ಪತ್ತುಸಾವಿರ
ನೂರಮೂಣಸ ರಸಾಖ್ಯ ರೂಪ ಶ
ರೀರದಲಿ ಭೋಜ್ಯ ಸುಪದಾರ್ಥದಿ ತಿಳಿದು ಭುಂಜಿಪುದು ೪

ಕ್ಷೀರಗತ ರಸ ರೂಪಗಳು ಮು
ನ್ನೂರ ಮೇಲೈವತ್ತುನಾಲಕು
ಚಾರು ಘೃತಗತ ರೂಪಗಳು ಇಪ್ಪತ್ತು ಒಂಬತ್ತು
ಸಾರ ಗುಡದೊಳಗೈದುಸಾವಿರ
ನೂರುವೊಂದು ಸುರೂಪ ದ್ವಿಸಹ
ಸ್ರಾರರಡು ಶತಪಂಚವಿಂಶತಿ ರೂಪ ಫಲಗಳಲಿ ೫

ವಿಶದ ಸ್ಥಿರ ತೀಕ್ಷ್ಣವು ನಿರ್ಹರ
ರಸಗಳಲಿ ಮೂರೈದುಸಾವಿರ
ತ್ರಿಶತನವ ರೂಪಗಳ ಚಿಂತಿಸಿ ಭುಂಜಪುದು ವಿಷಯ
ಶ್ವಸನ ತತ್ವೇಶರೂಳಗಿದ್ದೀ
ಪೆಸರಿನಿಂದಲಿ ಕರಸುವನು ಥೀ
ನಿಸಿದರೀಪರಿ ಮನಕೆ ಪೊಳವನು ಬಲ್ಲ ವಿಬುಧರಿಗೆ ೬

ಕಪಿಲ ನರಹರಿ ಭಾರ್ಗವತ್ರಯ
ವಪುಷನೇತ್ರದಿ ನಾಸಿಕಾಸ್ಯದಿ
ಶಫರ ನಾಮಕ ಜಿಹ್ವೆಯಲಿ ದಂತದಲಿ ಹಂಸಾಖ್ಯ
ತ್ರಿಪದಿ ಪಾದ್ಯ ಹಯಾಸ್ಯವಾಚ್ಯದೊ
ಳಪರಿಮಿತ ಸುಖಪೂರ್ಣ ಸಂತತ
ಕೃಪಣರೊಳಗಿದ್ದವರ ವರ ರಸ ಸ್ವೀಕರಿಸಿಕೊಡುವ ೭

ನಿರುಪಮಾನಂದಾತ್ಮ ಹರಿ ಸಂ
ಕರುಷಣ ಪ್ರದ್ಯುಮ್ನ ರೂಪದ
ಲಿರುತಿಹನು ಭೋಕ್ತೃಗಳೊಳಗೆ ತಚ್ಛಕ್ತಿದನು ಎನಿಸಿ
ಕರೆಸುವನು ನಾರಾಯಣನಿರು
ದ್ಧರೆಡು ನಾಮದಿ ಭೋಜ್ಯ ವಸ್ತುಗ
ನಿರುತ ತರ್ಪಕನಾಗಿ ತೃಪ್ತಿಯನೀವ ಚೇತನಕೆ ೮

ವಾಸುದೇವನು ಒಳಹೊರಗೆ ಅವ
ಕಾಶಕೊಡುವ ನಭಸ್ಥನಾಗಿ ರ
ಮಾಸಮೇತ ವಿಹಾರವಾಳ್ಪನು ಪಂಚರೂಪದಲಿ
ಆ ಸರೋರುಹ ಸಂಭವಾಭವ
ವಾಸವಾದ್ಯಮರಾದಿ ಚೇತನ
ರಾಸಿಯೊಳಗಿಹನೆಂದು ಅರಿತವನವನೆ ಕೋವಿದನು ೯

ವಾಸುದೇವನು ಅನ್ನದೊಳು ನಾ
ನಾ ಸುಭಕ್ಷ್ಯಾದಿ ಸಂಕರುಷಣ ಕೃ
ತೀಶ ಪರಮಾನ್ನದೊಳು ಘೃತದೊಳಗಿಪ್ಪನನಿರುದ
ಆ ಸುಪರ್ಣಾಂಸಗನು ಸೂಪದಿ
ವಾಸವಾನುಜ ಶಾಕದೊಳು ಮೂ
ಲೇಶ ನಾರಾಯಣನು ಸರ್ವತ್ರದಲಿ ನೆಲೆಸಿಹನು ೧೦

ಅಗಣಿತಾತ್ಮ ಸುಭೋಜನ ಪದಾ
ರ್ಥಗಳ ಒಳಗೆ ಅಖಂಡ ಒಂದೊಂ
ದಗಳಿನೊಳನಂತಾಂಶದಿಂದಲಿ ಖಂಡನೆಂದೆನಿಸಿ
ಜಗದ ಜೀವರ ತೃಪ್ತಿಬಡಿಸುವ
ಸ್ವಗತಭೇದ ವಿವರ್ಜಿತನ ಈ
ಬಗೆಯ ರೂಪವನರಿತು ಭುಂಜಿಸಿ ಅರ್ಪಿಸವನಡಿಗೆ ೧೧

ಈ ಪಠಿಯಲರಿತುಂಬ ನರ ನಿ
ತ್ಯೋಪವಾಸಿ ನಿರಾಮಯನು ನಿ
ಷ್ಪಾಪಿ ನಿತ್ಯ ವ ಹತ್ಸಯಜ್ಞಗಳಾಚರಿಸಿದವನು
ಪೋಪುದಿಪ್ಪದು ಬಪ್ಪದೆಲ್ಲಿ ರ
ಮಾಪತಿಗಧಿಷ್ಠಾನವೆನ್ನು ಕೃ
ಪಾಪಯೋಸಿಧಿ ಮಾತನಾಲಿಸುತಿಹ ಜನನಿಯಂತೆ ೧೨

ಆರರಡುಸಾವಿರದ ಮೇಲಿ
ನ್ನೂರ ಐವತ್ತೊಂದು ರೂಪದಿ
ಸಾರಭೋಕ್ತನಿರುದ್ಧದೇವನು ಅನ್ನವ ನುಣಿಸಿಪ
ಮೂರರಡುವರ ಸಾವಿರದ ಮೇ
ಲ್ಮೂರಧಿಕ ನಾಲ್ವತ್ತು ರೂಪದಿ
ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ ೧೩

ಎರಡು ಕೋಶದ ಒಳಹೊರಗೆ ಸಂ
ಕರುಷಣೈದು ಸುಲಕ್ಷದರವ
ತ್ತೆರಡ ಸಾವಿರದೇಳಧಿಕ ಶತರೂಪಗಳ ಧರಿಸಿ
ಕರಸಿಕೊಂಬ ಮನೋಮಯನು ಎಂ
ವರ ವಿದೂರನು ಈರರಡು ಸಾ
ವಿರದ ಮುನ್ನೂರಾದ ಮೇಲ್ನಾಲ್ಕಧಿಕ ಎಪ್ಪತ್ತು ೧೪

ರೂಪದಿಂ ವಿಜ್ಞಾನಮಯನೆಂ
ದೀಪೆಸರಿನಿಂ ವಾಸುದೇವನು
ವ್ಯಾಪಿಸಿಹ ಮಹದಾದಿ ತತ್ತ್ವವ ತತ್ಪತಿಗಳೊಳಗೆ
ಈ ಪುರುಷನಾಮಕ ಶುಭ ಸ್ವೇ
ದಾಪಳೆನಿಸಿ ರಮಾಂಬೆ ತಾ ಬ್ರ
ಹ್ಮಾಪರೋಕ್ಷಿಗಳಾದವರ ಲಿಂಗಾಂಗ ಕೆಡಿಸುವಳು ೧೫

ಐದುಸಾವಿರ ನೂರ ಇಪ್ಪ
ತ್ತೈದು ನಾರಾಯಣನ ರೂಪವ
ತಾ ಧರಿಸಿ ಕೊಂಡನುದಿನದಲಾನಂದಮಯನೆನಿಪ
ಐದು ಲಕ್ಷದಮೇಲೆ ಎಂಭ
ತ್ತೈದುಸಾವಿರ ನಾಲ್ಕು ಶತಗಳ
ಲೈದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನು ೧೬

ನೂರು ಒಂದು ಸುರೂಪದಿಂ ಶಾಂ
ತೀರಮಣ ತಾನನ್ನನೆನಿಪ್ಪೆ
ನೂರ ಮೇಲ್ಮೂರಧಿಕ ದಶ ಪ್ರಾಣಾಖ್ಯ ಪ್ರದ್ಯುಮ್ನ
ತೋರುತಿಹ ನೈವತ್ತು ಐದು ವಿ
ಕಾರ ಮನದೊಳು ಸಂಕರುಷಣ್ಪೆ
ನೂರು ಚತುರಾಶೀತಿ ವಿಜ್ಞಾನಾತ್ಮ ವಿಶ್ವಾಖ್ಯ ೧೭

ಮೂರುಸಾವಿರದರ್ಧ ಶತ ಮೇ
ಲೀರಧಿಕ ರೂಪಗಳ ಧರಿಸಿ ಶ
ರೀರದೊಳಗಾನಂದಮಯ ನಾರಾಯಣಾಹ್ವಯನು
ಈರೆರಡು ಸಾವಿರದ ಮೇಲ್ಮೂ
ನ್ನೂರು ಐದು ಸುರೂಪದಿಂದಲಿ
ಭಾರತೀಶನೊಳಿಪ್ಪ ನವನೀತಸ್ಥ ಘೃತದಂತೆ ೧೮

ಮೂರಧಿಕ ಐವತ್ತು ಪ್ರಾಣ ಶ
ರೀರದೊಳಗನಿರುದ್ಧನಿಪ್ಪೃ
ನೂರು ಹನ್ನೊಂದಧಿಕ ಪಾನನೊಳಿಪ್ಪ ಪ್ರದ್ಯುಮ್ನ
ಮೂರನೇ ವ್ಯಾನನೊಳಗೈದರೆ
ನೂರು ರೂಪದಿ ಸಂಕರುಷಣ್ಪೆ
ನೂರ ಮೂವತ್ತೈದುದಾನನೊಳಿಪ್ಪ ಮಾಯೇಶ ೧೯

ಮೂಲ ನಾರಾಯಣನು ಐವ
ತ್ತೇಳಧಿಕ ಐನೂರು ರೂಪವ
ತಾಳಿ ಸರ್ವತ್ರದಿ ಸಮಾನನೊಳಿಪ್ಪ ಸರ್ವೇಶ
ಲೀಲೆಗೈವನು ಸಾವಿರದ ಮೇ
ಲೇಳುನೂರ್ಹನ್ನೊಂದು ರೂಪವ
ತಾಳಿ ಪಂಚಪ್ರಾಣರೊಳು ಲೋಕಗಳ ಸಲಹುವನು ೨೦

ತ್ರಿನವತಿ ಸುರೂಪಾತ್ಮಕನಿರು
ದ್ಧನು ಸದಾ ಯಜಮಾನನಾಗಿ
ದ್ಧನಳ ಯಮ ಸೋಮಾದಿ ಪಿತೃ ದೇವತೆಗಳಿಗೆ ಅನ್ನ
ಎನಿಪನಾ ಪ್ರದ್ಯುಮ್ನ ಸಂಕರು
ಷಣ ವಿಭಾಗವಮಾಡಿ ಕೊಟ್ಟುಂ
ಡುಣಿಪ ನಿತ್ಯಾನಂದ ಭೋಜನದಾಯಿ ತುರ್ಯಾಹ್ವ ೨೧

ಷಣ್ಣವತಿ ನಾಮಕನು ವಸು ಮೂ
ಗಣ್ಣ ಭಾಸ್ಕರರೊಳಗೆ ನಿಂತು ಪ್ರ
ಸನ್ನರನುದಿನ ನಿಷ್ಕಪಟ ಸದ್ಭಕ್ತಿಯಲಿ ಮಾಳ್ಪ
ಪುಣ್ಯ ಕರ್ಮವ ಸ್ವೀಕರಿಸಿ ಕಾ
ರುಣ್ಯ ಸಾಗರನಾ ಪಿತೃಗಳಿಗ
ಗಣ್ಯ ಸುಖವಿತ್ತವರ ಪೊರೆವನು ಎಲ್ಲ ಕಾಲದಲಿ ೨೨

ಸುತಪ ಏಕೋತ್ತರ ಸುಪಂಚಾ
ಶತವರಣ ಕರಣಾದಿ ಚತುರ್ವಿಂ
ಶತಿ ಸುತತ್ವದಿ ಧಾತುಗಳೊಳಿದ್ದವಿರತನಿರುದ್ಧ
ಜತನ ಮಾಳ್ಪನು ಜಗದಿ ಜೀವ
ಪ್ರತತಿಗಳ ಷಣ್ಣವತಿ ನಾಮಕ
ಚತುರ ಮೂರ್ತಿಗಳರ್ಚಿಸುವರದರಿಂದ ಬಲ್ಲವರು ೨೩

ಅಬುಜಜಾಂಡೋದರನು ವಿಪಿನದಿ
ಶಬರಿಯೆಂಜಲನುಂಡ ಗೋಕುಲ
ದಬಲೆಯರ ನೊಲಿಸಿದನು ಋಷಿಪತ್ನಿಯರು ಕೊಟ್ಟನ್ನ
ಸುಭುಜ ತಾ ಭುಂಜಿಸಿದ ಸ್ವರಮಣ
ಕುಬುಜೆ ಗಂಧಕೆ ಒಲಿದ ಮುನಿಗಣ
ವಿಬುಧ ಸೇವಿತ ಬಿಡುವನೇ ಸಾವಿತ್ತ ಕರ್ಮಫಲ ೨೪

ಗಣನೆಯಿಲ್ಲದ ಪರಮಸುಖ ಸ
ದ್ಗುಣ ಗಣಂಗಳ ಲೇಶ ಲೇಶಕೆ
ಎಣೆಯೆನಿಸದು ರಮಾಬ್ಜಭವ ಶಕ್ರಾದಿಗಳ ಸುಖವು
ಉಣುತುಣುತ ವೈಮರದು ಕೃಷ್ಣಾ
ರ್ಪಣವೆನಲು ಕೈಕೊಂಬನರ್ಭಕ
ಜನನಿ ಭೋಜನ ಸಮಯದಲಿ ಕೈಯೊಡ್ಡುವಂದದಲಿ ೨೫

ಜೀವಕೃತ ಕರ್ಮಗಳ ಬಿಡದೆ ರ
ಮಾವರನು ಸ್ವೀಕರಿಸಿ ಫಲಗಳ
ನೀವನಧಿಕಾರಾನುಸಾರದಲವರಿಗನವರತ
ಪಾವಕನು ಸರ್ವಸ್ವ ಭುಂಜಿಸಿ
ತಾವಿಕಾರವ ನೈದನೊಮ್ಮೆಗೆ
ಪಾವನಕೆ ಪಾವನವೆನಿಪ ಹರಿಯುಂಬುದೇನರಿದು ೨೬

ಕಲುಷ ಜಿಹ್ವೆಗೆ ಸುಷ್ಟು ಭೋಜನ
ಜಲ ಮೊದಲು ವಿಷದೋರುವುದು ನಿ
ಷ್ಕಲುಷ ಜಿಹ್ವೆಗೆ ಸುರಸ ತೋರುವುದೆಲ್ಲ ಕಾಲದಲಿ
ಸುಲಲಿತಾಂಗಗೆ ಸಕಲ ರಸಮಂ
ಗಳವೆನಿಸುತಿಹವನ್ನಮಯ ಕೈ
ಕೊಳದೆ ಬಿಡುವನೆ ಪೂತಣಿಯ ವಿಷಮೊಲೆಯನುಂಡವನು ೨೭

ಪೇಳಲೇನು ಸಮೀರ ದೇವನು
ಕಾಳಕೂಟವನುಂಡು ಲೋಕವ
ಪಾಲಿಸಿದ ತದ್ವಾಸನೋರ್ವನು ಅಮೃತನೆನಿಸಿದನು
ಶ್ರೀಲಕುಮಿ ವಲ್ಲಭ ಶುಭಾ ಶುಭ
ಜಾಲ ಕರ್ಮಗಳುಂಬ ನುಪಚಯ
ದೇಹಿಗೆಗಳವಗಿಲ್ಲವೆಂದಿಗು ಸ್ವರಸಗಳ ಬಿಟ್ಟು ೨೮

ಈ ಪರಿಯಲಚ್ಯುತನ ತತ್ತ
ದ್ರೂಪ ತನ್ನಾಮಗಳ ಸಲೆ ನಾ
ನಾಪದಾರ್ಥದಿ ನೆನೆನೆನೆದು ಭುಂಜಿಸುತಲಿರು ವಿಷಯ
ಪ್ರಾಪಕಸ್ಥಾಪಕ ನಿಯಾಮಕ
ವ್ಯಾಪಕನು ಎಂದರಿದು ನೀ ನಿ
ರ್ಲೇಪನಾಗಿರು ಪುಣ್ಯಪಾಪಗಳರ್ಪಿಸವನಡಿಗೆ ೨೯

ಐದು ಲಕ್ಷೆಂಭತ್ತು ಒಂಬ
ತ್ತಾದ ಸಾವಿರದೇಳುನೂರ್ಮೇ
ಲೈದು ರೂಪವಧರಿಸಿ ಭೋಕ್ತೃಗ ಭೋಜ್ಯನೆಂದೆನಿಸಿ
ಶ್ರೀಧರಾದುರ್ಗಾರಮಣ ಪಾ
ದಾದಿ ಶಿರಪರ್ಯಂತ ವ್ಯಾಪಿಸಿ
ಕಾದುಕೊಂಡಿಹ ಸತತ ಶ್ರೀ ಜಗನ್ನಾಥ ವಿಠ್ಠಲನು ೩೦

ಅಂತು ಸಂಧಿ ೪ ಕ್ಕೆ, ಪದಗಳು ೧೦೬ ಕ್ಕೆ ಮಂಗಳಂ

ಶ್ರೀಕೃಷ್ಣಾರ್ಪಣಮಸ್ತು



# ಸಂಧಿ ೫ "ವಿಭೂತಿಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ೧

ಶ್ರೀ ತರುಣಿವಲ್ಲಭನ ಪರಮ ವಿ
ಭೂತಿ ರೂಪವ ಕಂಡ ಕಂಡ
ಲ್ಲೀ ತೆರದಿ ಚಿಂತಿಸುತ ಮನದಲಿ ನೋಡು ಸಂಭ್ರಮದಿ
ಸೀತ ಸಾಧಾರಣ ವಿಶೇಷ ಸ
ಜಾತಿ ಸ್ವಜಾಹಿತವು ಸಹಜ ವಿ
ಜಾತಿ ಖಂಡಾಖಂಡ ಬಗೆಗಳನರಿತು ಬುಧರಿಂದ ೨

ಜಲಧರಾಕಾಶದಲಿ ಚರಿಸುವ
ಹಲವು ಜೀವರ ನಿರ್ಮಿಸಿಹ ನದ
ರೂಪು ಸಜಾತಿ ವಿಜಾತಿ ಸಾಧಾರಣ ವಿಶೇಷಗಳ
ತಿಳಿದು ತತ್ತತ್ ಸ್ಥಾನದೊಳು ವೆ
ಗ್ಗಳಿಸಿ ಹಬ್ಬಿದ ಮನದಿ ಪೂಜಿಸು
ಕಲವ ವ್ಯಾಪ್ತನ ರೂಪಗಳ ನೋಡುತಲಿ ಹಿಗ್ಗುವುದು ೩

ಪ್ರತಿಮ ಸಾಲಿಗ್ರಾಮ ಗೋಭ್ಯಾ
ಗತಸತಿಥಿ ಶ್ರೀತುಳಸಿ ಪಿಪ್ಪಲ
ಯತಿ ವನಸ್ಥ ಗೃಹಸ್ಥ ವಟು ಯಜಮಾನ ಸ್ವಪರಜನ
ಪೃಥಿವಿ ಜಲ ಶಿಖಿ ಪವನ ತಾರಾ
ಪಥ ನವಗ್ರಹ ಯೋಗಕರಣ ಭ
ತಿಥಿ ಸಿತಾಸಿತ ಪಕ್ಷಸಂಕ್ರಮಣಪನಧಿಷ್ಠಾನ ೪

ಕಾದಕಾಂಚನದೊಳಗೆ ಶೋಭಿತ
ನಾದಿತೇಯಾಸ್ಯನ ತೆರದಿ ಲಕು
ಮೀಧವನು ಪ್ರತಿದಿನದಿ ಸಾಲಿಗ್ರಾಮದೊಳಗಿಪ್ಪ
ಐದುಸಾವಿರ ಮೇಲೆ ಮೂವ
ತ್ತ್ರ್ಯದಧಿಕ ಐನೂರು ರೂಪದಿ
ಪೂಧರಗಳಭಿಮಾನಿ ದಿವಿಜರೊಳಿಪ್ಪನನವರತ ೪

ಶ್ರೀರಮಣ ಪ್ರತಿಮೆಗಳೊಳಗೆ ಹದಿ
ಮೂರಧಿಕವಾಗಿಪ್ಪ ಮೇಲ್ನೆ
ನೂರು ರೂಪವ ಧರಿಸಿ ಇಪ್ಪನು ಅಹಿತಾಚಲದಿ
ವಾರು ಮಥನವಗ್ನಿಯು ಪಾವಕ
ತೋರುವಂತೆ ಪ್ರತೀಕ ಸುರರೊಳು
ತೋರುತಿಪ್ಪನು ತತ್ತದಾಕಾರದಲಿ ನೋಳ್ಪರಿಗೆ ೫

ಕರಣನಿಯ್ಯಾಮಕನು ತಾನಪ
ಕರಣದೊಳಗೈವತ್ತೆ ರಡು ಸಾ
ವಿರದ ಹದಿನಾಲ್ಕಧಿಕ ಶತರೂಪಂಗಳನು ಧರಿಸಿ
ಇರುತಿಹನು ತದ್ರೂಪ ನಾಮಗ
ಳರಿತು ಪೂಜಿಸುತಿಹರ ಪೂಜೆಯ
ನಿರುತ ಕೈಕೊಂಬನು ತೃಷಾರ್ತನು ಜಲವಕೊಂಬಂತೆ ೬

ಬಿಂಬರೂಪನು ಈ ತೆರದಿ ಜಪ
ಹೊಂಬಸುರ ಮೊದಲಾದ ಸುರರೊಳ
ಗಿಂಬುಗೊಂಡಿಹನೆಂದರಿತು ಧರ್ಮಾರ್ಥ ಕಾಮುಗಳ
ಹಂಬಲಿಸದನುದಿನದಿ ವಿಶ್ವಕು
ಟುಂಬಿ ಕೊಟ್ಟ ಕಣಾನ್ನ ಕುತ್ಸಿತ
ಕಂಬಳಿಯೆ ಸೌಭಾಗ್ಯವೆಂದವ ನಂಘ್ರಿಗಳ ಭಜಿಸು ೭

ವಾರಿಯೊಳಗಿಪ್ಪತ್ತನಾಲಕು
ಮೂರರಡು ಸಾವಿರದ ಮೇಲ್ನೂ
ನ್ನೂರು ಹದಿನೇಳೆನಿಪ ರೂಪವು ಶ್ರೀ ತುಳಸಿ ದಳದಿ
ನೂರು ಅರುವತ್ತೊಂದು ಪುಷ್ಪದಿ
ಮೂರಧಿಕ ದಶ ದೀಪದೊಳು ನಾ
ನ್ನೂರು ಮೂರು ಸುಮೂರ್ತಿಗಳು ಗಂಧದೊಳಗಿರುತಿಹವು ೮

ಅಷ್ಟದಳ ಸದ್ಹೃದಯ ಕಮಲಾ
ಧಿಷ್ಠಿತನು ತಾನಾಗಿ ಸರ್ವೋ
ತ್ಕೃಷ್ಟ ಮಹಿಮನು ದಳಗಳಲಿ ಸಂಚರಿಸುತೊಳಗಿದ್ದು
ದುಷ್ಟರಿಗೆ ದುರ್ಬುದ್ಧಿ ಕರ್ಮ ವಿ
ಶಿಷ್ಟರಿಗೆ ಸುಜ್ಞಾನ ಧರ್ಮ ಸು
ಪುಷ್ಟಿಗೈಸುತ ಸಂತಯಿಸ ನಿರ್ದುಷ್ಟ ಸುಖಪೂರ್ಣ ೯

ವಿತ್ತ ದೇಹಾಗಾರ ದಾರಾ
ಪತ್ಯ ಮಿತ್ರಾದಿಗಳೊಳಗೆ ಗುಣ
ಚಿತ್ತ ಬುದ್ಧ್ಯಾದಿಂದ್ರಿಯಗಳೊಳು ಜ್ಞಾನಕರ್ಮದೊಳು
ತತ್ತದಾಹ್ವಯನಾಗಿ ಕರೆಸುತ
ಸತ್ಯ ಸಂಕಲ್ಪಾನುಸಾರದಿ
ನಿತ್ಯದಲಿ ತಾ ಮಾಡಿ ಮಾಡಿಪನೆಂದು ಸ್ಮರಿಸುವುದು ೧೦

ಭಾವದ್ರವ್ಯ ಕ್ರಿಯೆಗಳೆನಿಸುವ
ಈ ವಿಧಾದ್ವೈತತ್ರಯಂಗಳ
ಭಾವಿಸುತ ಸದ್ಭಕ್ತಿಯಲಿ ಸರ್ವತ್ರ ಮರೆಯದಲೆ
ತಾವಕನು ತಾನೆಂದು ಪ್ರತಿದಿನ
ಸೇವಿಸುವ ಭಕ್ತರಿಗೆ ತನ್ನನು
ಈವ ಕಾವ ಕೃಪಾಳು ಕರಿವರಗೊಲಿದ ತೆರನಂತೆ ೧೧

ಬಾಂದಳವೆ ಮೊದಲಾದುದರೊಳೊಂ
ದೊಂದರಲಿ ಪೂಜಾ ಸುಸಾಧನ
ವೆಂದೆನಿಸುವ ಪದಾರ್ಥಗಳು ಬಗೆಬಗೆಯ ನೂತನದಿ
ಸಂದಣಿಸಿಕೊಂಡಿಹವು ಧ್ಯಾನಕೆ
ತಂದಿನಿತು ಚಿಂತಿಸಿ ಸದಾ ಗೋ
ವಿಂದನರ್ಚಿಸಿ ನೋಡು ನಲಿನಲಿದಾಡು ಕೊಂಡಾಡು ೧೨

ಜಲಜನಾಭನ ಮೂರ್ತಿ ಮನದಲಿ
ನೆಲೆಗೊಳಿಸಿ ನಿಶ್ಚಲ ಭಕುತಿಯಲಿ
ಚಳಿ ಬಿಸಿಲು ಮಳೆಗಾಳಿಗಳ ಸಿಂದಿಸದ ಸತ್ಯದಲಿ
ನಲಿದಲಿಹ ಗಂಧವೆ ಸುಗಂಧವು
ಒಲವ ರಸ ರೂಪವೆ ಸುದೀಪಗ
ಳಲಿರು ಚಾಮರ ಶಬ್ದ ವಾದ್ಯಗಳರ್ಪಿಸಲು ಒಲಿವ ೧೩

ಗೋಳಕಗಳು ರಮಾರಮಣನ ನಿ
ಜಾಲಯಗಳನುದಿನದಿ ಸಂಪ್ರ
ಕ್ಷಾಳನೆಯೆ ಸಮ್ಮಾರ್ಜನವು ಕರಣಗಳೆ ದೀಪಗಳ
ನಾಲು ತತ್ತ್ವದ್ವಿಷಯಗಳ ಸ
ಮ್ಮೇಳನನ ಪರಿಯಂಕ ತತ್ಸುಖ
ದೇಳಿಗೆಯೆ ಸುಪ್ಪತ್ತಿಗಾತ್ಮ ನಿವೇದನವೆ ಶಯನ ೧೪

ಪಾಪ ಕರ್ಮವು ಪಾದುಕಗಳನು
ಲೇಪನವು ಸತ್ಪುಣ್ಯ ಶಾಸ್ತ್ರಾ
ಲಾಪನವೆ ಶ್ರೀ ತುಲಸಿ ಸುಮನೋ ವೃತ್ತಿಗಳು ಸುಮನ
ಕೋಪ ಧೂಪವು ಭಕ್ತಿ ಭೂಷಣ
ವ್ಯಾಪಿಸಿದ ಸದ್ಬುದ್ಧಿ ಛತ್ರವು
ದೀಪವೇ ಸುಜ್ಞಾನ ಆರಾರ್ತಿಗಳ ಗುಣಕಥನ ೧೫

ಮನವಚನ ಕಾಯಕ ಪ್ರದಕ್ಷಿಣಿ
ಯನುದಿನದಿ ಸರ್ವತ್ರ ವ್ಯಾಪಕ
ವನರುಹೇಕ್ಷಣ ಗರ್ಪಿಸುತ ಮೋದಿಸುತಲಿರು ಸತತ
ಅನುಭವಕೆ ತಂದುಕೊ ಸಕಲ ಸಾ
ಧನಗಳೊಳಗಿದು ಮುಖ್ಯ ಪಾಮರ
ಮನುಜರಿಗೆ ಹೇಳಿದರ ತಿಳಿಯದು ಬುಧರಿಗಲ್ಲದಲೆ ೧೨

ಚತುರವಿಧ ಪುರುಷಾರ್ಥ ಪಡೆವರ
ಚತುರ ದಶಲೋಕಗಳ ಮಧ್ಯದೊ
ಳಿತರುಪಾಯಗಳಿಲ್ಲ ನೋಡಲು ಸಕಲ ಶಾಸ್ತ್ರದಲಿ
ಸತತ ವಿಷಯೇಂದ್ರಿಯಗಳಲಿ ಪ್ರವಿ
ತತನೆನಿಸಿ ರಾಜಿಸುವ ಲಕುಮಿಾ
ಪತಿಗೆ ಸರ್ವ ಸಮರ್ಪಣೆಯು ಮಹಪೂಜೆ ಸದುಪಾಯು ೧೩

ಗೋಳಕವೆ ಕುಂಡಾಗ್ನಿ ಕರಣವು
ಮೇಲೊದಗಿ ಬಹ ವಿಷಯ ಸಮಿಧವು
ಗಾಳಿಯತ್ನವು ಕಾಮಧೂಮವು ಸನ್ನಿಧಾನಾರ್ಚಿ
ಮೇಳನವೆ ಪ್ರಜ್ವಾಲೆ ಕಿಡಿಗಳು
ತೂಳಿದಾನಂದಗಳು ತತ್ತ
ತ್ಕಾಲ ಮಾತುಗಳಲ್ಲ ಮಂತ್ರಾಧ್ಯಾತ್ಮ ಯಜ್ಞವಿದು ೧೪

ಮಧು ವಿರೋಧಿಯ ಪಟ್ಟಣಕೆ ಪೂ
ರ್ವದ ಕವಾಟಗಳಕ್ಷಿ ನಾಸಿಕ
ವದನ ಶ್ರೋತ್ರಗಳರಡು ಉತ್ತರ ದಕ್ಷಿಣ ದ್ವಾರ
ಗುದ ಉಪಸ್ಥಗಳೆರಡು ಪಶ್ಚಿಮ
ಕದಗಳನಿಪುವು ಷಟ್ಸರೋಜವೆ
ಸದನ ಹೃದಯವೆ ಮಂಟಪಂಗಳು ತ್ರಿಗುಣಗಳೆ ಕಲಶ ೧೫

ಧಾತುಗಳು ಸಪ್ತಾವರಣ ಉಪ
ವೀಥಿಗಳು ನಾಡಿಗಳು ಮದಗಳು
ಯೂಥಪಗಳು ಸುಷುಮ್ನ ನಾಡಿಯೆ ರಾಜಪಂಥಾನ
ಈ ತನೂರುಹಗಳ ವನಂಗಳು
ಮಾತರಿಶ್ವನು ಪಂಚರೂಪದಿ
ಪಾತಕಗಳಂಬರಿಗಳನು ಸಂಹರಿಪ ತಳವಾರ ೨೦

ಇನ ಶಶಾಂಕಾದಿಗಳೆ ಲಕ್ಷ್ಮೀ
ವನಿತೆಯರಸನ ದ್ವಾರಪಾಲಕ
ರೆನಿಸುತಿಪ್ಪರು ಮನದ ವೃತ್ತಿಗಳೇ ಪದಾತಿಗಳು
ಅನುಭವಿಪ ವಿಷಯಂಗಳೇ ಪ
ಟ್ಟಣಕೆ ಬಪ್ಪ ಪಸಾರಗಳು ಜೀ
ವನೆ ಸುವರ್ತಕ ಕಪ್ಪಗಳ ಕೈಕೊಂಬ ಹರಿತಾನು ೨೧

ಉರುಪರಾಕ್ರಮ ನರಮನೆಗೆ ದಶ
ಕರಣಗಳು ಕನ್ನಡಿಯ ಸಾಲುಗ
ಳರಿ ವಿದೂರನ ಸದ್ವಿಹಾರಕೆ ಚಿತ್ತ ಮಂಟಪವು
ಮರಳಿ ಬೀಸುವ ಶ್ವಾಸಗಳು ಚಾ
ಮರ ವಿಲಾಸಿನಿ ಬುದ್ಧಿ ದಾವೋ
ದರನೆ ಸಾಷ್ಟಾಂಗ ಪ್ರಣಾಮವೆ ಸುಶಯನಗಳು ೨೨

ಮಾರಮಣನರಮನೆಗೆ ಸುಮಹಾ
ದ್ವಾರವೆನಿಸುವ ವದನಕೊಪ್ಪುವ
ತೋರಣ ಸ್ಮಶ್ರುಗಳು ಕೇಶಗಳೇ ಪತಾಕೆಗಳು
ಊರಿನಡೆವಂಘ್ರಿಗಳು ಜಂಘೆಗ
ಳೂರು ಮಧ್ಯೋದರ ಶಿರಗಳಾ
ಗಾರ ದುಪ್ಪರಿಗೆಗಳು ಕೋಶಗಳೈದು ಕೋಣೆಗಳು ೨೩

ಈ ಶರೀರವೆ ರಥ ಪತಾಕ ಸು
ವಾಸಗಳೆ ಪುಂಡ್ರಗಳು ಧ್ವಜ ಸಿಂ
ಹಾಸನವೆ ಚಿತ್ತವು ಸುಬುದ್ಧಿಯೆ ಕಲಶ ಸನ್ಮನವು
ವಾಶಗುಣ ದಂಡತ್ರಯುಗಳು ಶು
ಭಾಶುಭನ್ವಯ ಕರ್ಮ ಚಕ್ರ ವು
ಹಾ ಸಮುಥಾರ್ಶ್ವಗಳು ದಶ ಕರಣಂಗಳೆನಿಸುವುವು ೨೪

ಮಾತರಿಶ್ವನು ದೇಹ ರಥದೊಳು
ಸೂತನಾಗಿಹ ಸರ್ವಕಾಲದಿ
ಶ್ರೀ ತರುಣಿವಲ್ಲಭ ರಥಿಕನೆಂದರಿದು ನಿತ್ಯದಲಿ
ಪ್ರೀತಿಯಿಂದಲಿ ಪೋಷಿಸುವ ವಾ
ತಾತಪಾದಿಗಳಿಂದಲವಿರತ
ನೀ ತನುವಿನೊಳು ಮಮತೆ ಬಿಟ್ಟಹಸವನೆ ಮಹಯೋಗಿ ೨೫

ಜವವೆನಿಪ ವನಧಿಯೊಳು ಕರ್ಮ
ಪ್ರವಹದೊಳು ಸಂಚರಿಸುತಿಹ ದೇ
ಹವೆ ಸುನಾವೆಯಮಾಡಿ ತನ್ನವರಿಂದಲೊಡಗೂಡಿ
ದಿವಸ ದಿವಸಗಳಲ್ಲಿ ಲಕುಮಿಾ
ಧವನು ಕ್ರೀಡಿಪನೆಂದು ಚಿಂತಿಸೆ
ಪವನನೈಯ ಭವಾಬ್ಧಿ ದಾಟಿಸಿ ಪರಮ ಸುಖನೀವ ೨೬

ಆ ಪಣಾಲಯ ಗತ ಪದಾರ್ಥವು
ಸ್ತ್ರೀ ಪುರುಷಗಳಿಂದ್ರಿಯಗಳಲಿ
ದೀಪ ಪಾವಕರೊಳಗಿಡುವ ತೈಲಾದಿ ದ್ರವ್ಯಗಳು
ಆ ಪರಮಗವದಾನವೆಂದು ಪ
ದೇಪದೇ ಮರೆಯದಲೆ ಸ್ಮರಿಸುತ
ಭೂಪನಂದದಿ ಸಂಚರಿಸು ನಿರ್ಭಯದಿ ಸರ್ವತ್ರ ೨೭

ವಾರಿಜ ಭವಾಂಡವೆ ಮಂಟಪ
ಮೇರುಗಿರಿ ಸಿಂಹಾಸನವು ಭಾ
ಗೀರಥಿಯೆ ಮಜ್ಜನವು ದಿಗ್ವಸ್ತ್ರಗಳು ನುಡಿಮಂತ್ರ
ಭೂರುಹಜ ಫಲಪುಷ್ಪ ಗಂಧ ಸ
ಮೀರ ಶಶಿರವಿ ದೀಪ ಭೂಷಣ
ತಾರಕೆಗಳೆಂದರ್ಪಿಸಲು ಕೈಕೊಂಡು ಮನ್ನಿಸುವ ೨೮

ಭೂಸುರರೊಳಿಪ್ಪಬ್ಜ ಭವನೊಳು
ವಾಸುದೇವನು ವಾಯು ಖಗಪ ಸ
ದಾಶಿವಹಿಪೇಂದ್ರನು ವಿವಸ್ವಾನ್ನಾಮಕಸ್ವಾಯರ್ಭ
ಭೇಶ ಕಾಮಮರಾಸ್ಯ ವರುಣಾ
ದೀಸುರರು ಕ್ಷತ್ರಿಯರೊಳಿಪ್ಪರು
ವಾಸವಾಗಿಹ ಸಂಕರುಷಣನ ನೋಡಿ ಮೋದಿಸರು ೨೯

ಮೀನಕೇತನ ತನಯ ಪ್ರಾಣೋ
ಪಾನ ವ್ಯಾನೋದಾನ ಮುಖ್ಯೇ
ಕೋನಪಂಚಾಶನ್ಮರುದ್ಗಣ ರುದ್ರ ವಸುಗಣರು
ಮೇನಕಾತ್ಮಜ ಕುವರ ವಿಷ್ವ
ಕ್ಸೇನ ಧನಪಾದ್ಯನಿಮಿಷರನು ಸ
ಮಾನುರಾಗದಿ ಧೇನಿಪುದು ವೈಶ್ಯರೊಳು ಪ್ರದ್ಯುಮ್ನ ೩೦

ಇರುತಿಹರು ನಾಸತ್ಯದಸ್ರರು
ನಿರುರುತಿಯು ಯಮಧರ್ಮ ಯಮ ಕಿಂ
ಕರರು ಮೇದಿನಿ ಕಾಲಮೃತ್ಯು ಶನೈಶ್ಚರಾದಿಗಳು
ಕರೆಸಿಕೊಂಬರು ಶೂದ್ರರೆಂದನ
ವರತ ಶೂದ್ರರೊಳಿಪ್ಪರಿವರೊಳ
ಗಿರುವಿದೂರನಿರುದ್ಧನಿಹನೆಂದರಿದು ಮನ್ನಿಪುದು ೩೧

ವೀತಭಯ ನಾರಾಯಣ ಚತು
ಷ್ಟಾತು ತಾನೆಂದೆನಿಸಿ ತತ್ತ
ಜ್ಞಾತಿಧರ್ಮ ಸುಕರ್ಮಗಳ ತಾ ಮಾಡಿ ಮಾಡಿಸುವ
ಚೇತನನ ಒಳಹೊರಗೆ ಓತ
ಪ್ರೋತನಾಗಿದ್ದೆಲ್ಲರಿಗೆ ಸಂ
ಪ್ರೀತಿಯಲಿ ಧರ್ಮಾರ್ಥ ಕಾಮಾದಿಗಳ ಕೊಡುತಿಹನು ೩೨

ನಿಧನ ಧನದ ವಿಘಾತ ವಿಗತಾ
ಭ್ಯಧಿಕ ನಮ ಸಮವರ್ತಿ ಸಾಮಗ
ತ್ರಿದಶಗಣ ಸಂಪೂಜ್ಯ ತ್ರಿಕಕುದ್ಧಾಮ ಶುಭನಾಮ
ಮಧುಮಥನ ಭೃಗುರಾಮ ಸ್ತೋಟಕ
ವದನ ಸರ್ವಪದಾರ್ಥದೊಳು ತುದಿ
ಮೊದಲು ತುಂಬಿಹನೆಂದು ಚಿಂತಿಸು ಬಿಂಬರೂಪದಲಿ ೩೩

ಕನ್ನಡಿಯ ಕೈಪಿಡಿದು ನೋಡಲು
ತನ್ನಿರವು ಸವ್ಯಾಪಸವ್ಯದಿ
ಕಣ್ಣಿಗೊಪ್ಪುವತೆರದಲನಿರುದ್ಧನಿಗೆ ಈ ಜಗವು
ಭಿನ್ನ ಭಿನ್ನವೆ ತೋರುತಿಪ್ಪುದು
ಜನ್ಯವಾದುದರಿಂದ ಪ್ರತಿ ಬಿಂ
ಬನ್ನ ಮಯಗಾನೆಂದರಿದು ಪೂಜಿಸಲು ಕೈಕೊಂಬ ೩೪

ಬಿಂಬರೆನಿಪರು ಸ್ತ್ರೋತ್ತಮರು ಪ್ರತಿ
ಬಿಂಬರೆನಿಪರು ಸ್ಥಾವರರು ಪ್ರತಿ
ಬಂಬ ಬಿಂಬಗಳೊಳಗೆ ಕೇವಲ ಬಿಂಬ ಹರಿಯೆಂದು
ಸಂಭ್ರಮದಿ ಪಾಡುತಲಿ ನೋಡುತ
ಲುಂಬುಡುವುದಿಡುವುದು ಕೊಡುವುದೆ
ಲ್ಲಂಬುಜಾಂಬಕನಂಘ್ರಿ ಪೂಜೆಗಳೆಂದು ನಲಿದಾಡು ೩೫

ನದಿಯುಜಲ ನದಿಗೆರೆವ ತೆರದಂ
ದದಲಿ ಭಗವದ್ಭೃತ್ಯಧರ್ಮಗ
ಳುದಧಿಶಯನನಿಗರ್ಪಿಸುತ ವ್ಯಾವರ್ತ ನೀನಾಗಿ
ವಿಧಿನಿಷೇಧಾದಿಗಳಿಗೊಳಗಾ
ಗದಲೆ ಮಾಡುತ ದರ್ವಿಯಂದದಿ
ಪದುಮನಾಭನ ಸಕಲ ಕರ್ಮಗಳಲ್ಲಿ ನೆನೆವುತಿರು ೩೬

ಅರಿಯದಿದ್ದರು ಎಮ್ಮೊಳಿದ್ದನ
ವರತ ವಿಷಯಗಳುಂಬ ಜಿಹ್ವೆ ನೋ
ತ್ತರದಿ ತನಗರ್ಪಿಸಲು ಚಿತ್ಸುಖವಿತ್ತು ಸಂತೈಪ
ಸರಿತು ಕಾಲ ಪ್ರವಹಗಳು ಕಂ
ಡರೆಯು ಸರಿಕಾಣದಿರೆ ಪರಿಪುಷ್ಟ
ಮರಳಿ ಮಜ್ಜನ ಪಾನ ಕರ್ಮಗಳಿಂದೆ ಸುಖಿಸುವವು ೩೭

ಏನುಮಾಡುವ ಕರ್ಮಗಳ ಲಕು
ಮೀನಿವಾಸನಿಗರ್ಪಿಸನುಸಂ
ಧಾನ ಪೂರ್ವಕದಿಂದ ಸಂದೇಹಿಸದೆ ದಿನದಿನದಿ
ಮಾನನಿಧಿ ಕೈಕೊಂಡು ಸುಖ ವಿ
ತ್ತಾನತರ ಸಂತೈಪ ತೃಣಜಲ
ಧೇನು ತಾನುಂಡನವರತ ಪಾಲ್ಗರೆವ ತೆರನಂತೆ ೩೮

ಪೂರ್ವದಕ್ಷಿಣ ಪಶ್ಚಿಮೋತ್ತರ
ಪಾರ್ವತೀಪತಿ ಅಗ್ನಿ ವಾಯು ಸು
ಶಾರ್ವರೀಕರ ದಿಗ್ಪಲಯದೊಳು ಹಂಸನಾಮಕನು
ಸರ್ವಕಾಲದಿ ಸರ್ವರೊಳು ಸುರ
ಸಾರ್ವಭೌಮನು ಸ್ವೇಚ್ಛೆಯಲಿ ಮ
ತ್ತೋರ್ವರಿಗೆ ಗೋಚರಿಸದವ್ಯಕ್ತಾತ್ಮನೆಂದೆನಿಸಿ ೩೯

ಪರಿ ಇಡಾವತ್ಸರನು ಸಂವ
ತ್ಸರದೊಳನಿರುದ್ಧಾದಿ ರೂಪವ
ಧರಿಸಿ ಬಾರ್ಹಸ್ಪತ್ಯ ಸೌರಭ ಚಾಂದ್ರಮನು ಎನಿಸಿ
ಇರುತಿಹ ಜಗನ್ನಾಥ ನಿರ್ಮಲ
ಸ್ಮರಿಸುವವರನು ಸಂತಯಿಪನೆಂ
ದುರು ಪರಾಕ್ರಮಿಯುಚಿತ ಸಾಧನ ಯೋಗ್ಯತಯನರಿತು ೪೧

ಅಂತು ಸಂಧಿ ೫ಕ್ಕೆ ಪದಗಳು ೧೪೬ಕ್ಕೆ ಮಂಗಳಂ
ಶ್ರೀಕೃಷ್ಣಾರ್ಪಣಮಸ್ತು

---

## ಸಂಧಿ ೬ "ಪಂಚಮಹಾಯಜ್ಞ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಜನನಿ ಪಿತಭೂವಾರಿದಾಂಬರ
ವೆನಿಪ ಪಂಚಾಗ್ನಿಯಲಿ ನಾರಾ
ಯಣನ ತ್ರಿಂಶತಿ ಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳ
ನೆನೆದು ದಿವಸಗಳೆಂಬ ಸಮಿಧೆಗ
ಳನು ನಿರಂತರ ಹೋಮಿಸುತ ಪಾ
ವನಕೆ ಪಾವನನೆನಿಪ ಪರಮನ ಜೋಡು ಪರಮಸುಖ ೧

ಗಗನ ಪಾವಕ ಸಮಿಧಿ ರವಿರ
ಶ್ಮಿಗಳೆ ಧೂಮವು ಅರ್ಚಿಯೆನಿಪುವ
ಹಗಲು ನಕ್ಷತ್ರಗಳೆ ಕಿಡಿಗಳು ಚಂದ್ರಮಾಂಗಾರ
ಮೃಗವರೋದರನೊಳಗೆ ಐರೂ
ಪಗಳ ಚಿಂತಿಸಿ ಭಕ್ತಿರಸ ಮಾ
ತುಗಳ ಮಂತ್ರವ ಮಾಡಿ ಹೋಮಿಸುವರು ವಿಪಶ್ಚಿತರು ೨

ಪಾವಕನು ಪರ್ಜನ್ಯ ಸಮಿಧಿಯು
ಪ್ರಾವಹೀಪತಿ ಧೂಮಗಳೆ ಮೇ
ಘಾವಳಿಗಳರ್ಚಿಕ್ಷಣ ಪ್ರಭೆ ಗರ್ಜನವೆ ಕಿಡಿಯು
ಭಾವಿಸುವುದಂಗಾರ ಸಿಡಿಲೆಂ
ದೀವಿಧಾಗ್ನಿಯೊಳಬ್ಧಿಜಾತನ
ಕೋವಿದರು ಹೋಮಿಸುವರನುದಿನ ಪರಮ ಭಕುತಿಯಲಿ ೩

ಧರಣಿಯೆಂಬುದೆ ಅಗ್ನಿ ಸಂವ
ತ್ಸರವೆ ಸಮಿಧಿ ವಿಹಾಯಸವೆ ಹೊಗೆ
ಇರುಳುರಿ ದಿಶಾಂಗಾರವಾಂತರ ದಿಗ್ವಲಯ ಕಿಡಿಯು
ವರುಷವೆಂಬಾಹುತಿಗಳಿಂದಲಿ
ಹರಿಯಮೆಚ್ಚಿಸಿ ಸಕಲರೊಳಗ
ಧ್ವರಿಯನಾಗಿರು ಸರ್ವ ರೂಪಾತ್ಮಕನ ಚಿಂತಿಸುತ ೪

ಪುರುಷ ಶಿಖಿ ವಾಕ್ಸಮಿಧಿ ಧೂಮವು
ಕರಣವರ್ಚಿಯು ಜಿಹ್ವೆ ಶ್ರೋತ್ರ ಗ
ಳೆರಡು ಕಿಡಿಗಳು ಲೋಚನಗಳಂಗಾರವೆನಿಸುವುವು
ನಿರುತ ಭುಂಜಿಸುವನ್ನ ಯದುಕುಲ
ವರನಿಗವದಾನಗಳು ಎಂದೀ
ಪರಿ ಸಮರ್ಪಣೆಗೈಯೆ ಕೈಕೊಂಡನುದಿನದಿ ಪೊರವ ೫

ಮತ್ತೆಯೋಷಾಗ್ನಿಯೊಳು ತಿಳಿವುದು
ಪಸ್ಥ ತತ್ವನೆ ಸಮಿಧಿ ಕಾಮೋ
ತ್ಪತ್ತಿಪರಮಾತುಗಳೆ ಧೂಮವು ಯೋನಿಮಹದರ್ಚಿ
ತತ್ಪ್ರವೇಶಾಂಗಾರ ಕಿಡಿಗಳು
ಉತ್ಸಹಗಳುತ್ಸರ್ಜನವು ಪುರು
ಷೋತ್ತಮನಿಗವದಾನವೆನೆ ಕೈಕೊಂಡು ಮನ್ನಿಸುವ ೬

ಐದು ಅಗ್ನಿಗಳಲ್ಲಿ ಮರೆಯದ
ಲೈದು ರೂಪಾತ್ಮಕನ ಇಪ್ಪ
ತ್ತೈದು ರೂಪಗಳನುದಿನದಿ ನೆನೆವರಿಗೆ ಜನುಮಗಳ
ಐದಿಸನು ನಳಿನಾಕ್ಷ ರಣದೊಳು
ಮೈದುನನ ಕಾಯ್ದಂತೆ ಸಲಹುವ
ಬೈದವಗೆ ಗತಿಯಿತ್ತ ಭವಹರ ಭಕ್ತವತ್ಸಲನು ೭

ಪಂಚನಾರೀ ತುರಗದಂದದಿ
ಪಂಚರೂಪಾತ್ಮಕನು ತಾ ಷಟ್
ಪಂಚರೂಪವ ಧರಿಸಿ ತತ್ತನ್ನಾಮದಿಂ ಕರೆಸಿ
ಪಂಚ ಪಾವಕ ಮುಖದಿ ಗುಣಮಯ
ಪಂಚ ಭೂತಾತ್ಮಕ ಶರೀರವ
ಪಂಚ ವಿಧ ಜೀವರಿಗೆ ಕೊಟ್ಟಲ್ಲಲ್ಲಿ ರಮಿಸುವನು ೮

ವಿಧಿಭವಾದಿ ಸಮಸ್ತ ಜೀವರ
ಹೃದಯದೊಳಗೇಕಾತ್ಮನೆನಿಸುವ
ಪದುಮನಾಭನು ಅಚ್ಯುತಾದಿ ಅನಂತ ರೂಪದಲಿ
ಅಧಿಸು ಭೂತಾಧ್ಯಾತ್ಮವಧಿ ದೈ
ವದೊಳು ಕರೆಸುವ ಪ್ರಾಣನಾಗಾ
ಭಿಧನು ದಶರೂಪದಲಿ ದಶವಿಧ ಪ್ರಾಣರೊಳಗಿದ್ದು ೯

ಈರಯಿದು ಸಾವಿರದ ಇಪ್ಪ
ತ್ತಾರಧಿಕ ಮುನ್ನೂರು ರೂಪಗ
ಳೀರೆರಡು ಸ್ಥಾನದಲಿ ಚಿಂತಿಪುದನುದಿನದಿ ಬುಧರು
ನೂರ ಇಪ್ಪತ್ತೇಳಧಿಕ ಮೂ
ರಾರು ಸಾವಿರ ರೂಪದಿಂ ದಶ
ಮಾರುತರೊಳಿದ್ದವರವರ ಪೆಸರಿಂದ ಕರೆಸುವನು ೧೦

ಚಿತ್ತಯಿಸುವುದು ಎಂಟಧಿಕ ಇ
ಪ್ಪತ್ತುಸಾವಿರ ನಾಲ್ಕುಶತದೈ
ವತ್ತುಮೂರು ಸುಮೂರ್ತಿಗಳು ಅಹುವಲ್ಲಿ ಪರಿಯಂತ
ಹತ್ತು ನಾಲಕು ರೂಪಗಳ ನೆರೆ
ವಿಸ್ತರವನೀಪರಿ ತಿಳಿದು ಪುರು
ಷೋತ್ತಮನ ಸರ್ವತ್ರ ಪೂಜೆಯಮಾಡು ಕೊಂಡಾಡು ೧೧

ಈರಡು ಶತವಷ್ಟಧಿಕ ಹದಿ
ನಾರು ಸಾವಿರ ರೂಪ ಸರ್ವ ಶ
ರೀರದೊಳು ಶಬ್ದಾದಿಗಳಧಿಷ್ಠಾನದೊಳಗಿಪ್ಪ
ಮಾರುತನು ನಾಗಾದಿ ರೂಪದಿ
ಮೂರನೇ ಗುಣಮಾನಿ ಶ್ರೀ ದು
ರ್ಗಾರಮಣ ವಿದ್ಯಾಖ್ಯಮೋಹವ ಕೊಡುವ ಕರಣಕ್ಕೆ ೧೨

ಐದು ವಿದ್ಯೆಗಳೊಳಗೆ ಇಹ ನಾ
ಗಾದಿಗಳಧಿಷ್ಠಾನದಲಿ ಲಕು
ಮೀಧವನು ಕೃದ್ಧೋಲ್ಕ ಮೊದಲಾದೈದು ರೂಪಗಳ
ತಾ ಧರಿಸಿ ಸಜ್ಜನರವಿದ್ಯವ
ಛೇದಿಸುವ ತಾಮಸರಿಗಜ್ಞಾ
ನಾದಿಗಳ ಕೊಟ್ಟವರವರ ಸಾಧನವ ಮಾಡಿಸುವ ೧೩

ಗೋತ್ರಗಳೊಳುದ್ಗೀಥನಿಸಿಹ ಪ್ರ
ಸ್ತಾವಹಿಂಕಾರೆರಡು ರೂಪದ
ಲಾವಿಯುಜಗಳೊಳಿಹನು ಪ್ರತಿ ಹಾರಾಖ್ಯ ಹಯುಗಳೊಳು
ಜೀವನಪ್ರದ ನಿಧನ ಮನುಜರೊ
ಳೀ ವಿಧದಲಿಹ ಪಂಚ ಸಾಮವ
ಧ್ಯಾನ ಧ್ಯಾನಕೆ ನೆನೆವರಿಗೆ ಐದಿಸನು ಜನ್ಮಗಳ ೧೪

ಯುಗ ಚತುಷ್ಟಯುಗಳಲಿ ತಾನಿ
ದ್ದ್ಯುಗ ಪ್ರವರ್ತಕ ಧರ್ಮ ಕರ್ಮಗ
ಳಿಗೆ ಪ್ರವರ್ತಕನೆನಿಸಿ ವಾಸುದೇವಾದೀರೆರಡುರೂಪ
ತೆಗೆದುಕೊಂಡು ಯುಗಾದಿ ಕೃತು ತಾ
ಯುಗ ಪ್ರವರ್ತಕನೆನಿಸಿ ಧರ್ಮ
ಪ್ರಘಟಕನು ತಾನಾಗಿ ಭಕುತರಿಗೀವ ಸಂಪದವ ೧೫

ತಲೆಯೊಳಿಹ ನಾರಾಯಣನು ಗಂ
ಟಲೆಡೆ ಒಡಲೊಳು ವಾಸುದೇವನು
ಜಲದಲಿಹ ಪ್ರದ್ಯುಮ್ನ ಎಡಭಾಗದಲಿ ಅನಿರುದ್ಧ
ಕೆಳಗಿನಂಗದಿ ಸಂಕರುಷಣನ
ತಿಳಿದು ಈ ಪರಿ ಸಕಲ ದೇಹಗ
ಳೊಳಗ ಪಂಚಾತ್ಮಕನ ರೂಪವ ನೋಡು ಕೊಂಡಾಡು ೧೬

ತನುವಿಶಿಷ್ಟದಿಯಿಪ್ಪ ನಾರಾ
ಯಣನು ಕಟಿ ಪಾದಾಂತ ಸಂಕರು
ಷಣನು ಶಿರ ಜಘನಾಂತವಾಗಿಹ ವಾಸುದೇವಾಖ್ಯ
ಅನಿಮಿಷೇಶನಿರುದ್ಧ ಪ್ರದ್ಯು
ಮ್ನನು ಎಡದಿ ಬಲಭಾಗದಲಿ ಚಿಂ
ತನೆಯ ಮಾಳ್ಪರಿಗುಂಟೆ ಮೈಲಿಗೆ ವಿಧಿ ನಿಷೇಧಗಳು ೧೭

ಪದುಮನಾಭನು ಪಾಣಿಯೊಳಗಿಹ
ವದನದಲಿ ಹೃಷಿಕೇಶ ನಾಸಿಕ
ಸದನದಲಿ ಶ್ರೀಧರನು ಜಿಹ್ವೆಯೊಳಿಪ್ಪ ವಾಮನನು
ಮೃದುಳತ್ವಗ್ದೇಶದಿ ತ್ರಿವಿಕ್ರಮ
ಮಧು ವಿರೋಧಿಯು ಲೋಚನದಿ ಕ
ರ್ಣದಲಿ ಇಪ್ಪನು ವಿಷ್ಣುನಾಮಕ ಶ್ರವಣನೆಂದೆನಿಸಿ ೧೮

ಮನದಲಿಹ ಗೋವಿಂದ ಮಾಧವ
ಘನಪಸಖ ತತ್ವದಲಿ ನಾರಾ
ಯಣ ಮಹತ್ತತ್ವದಲಿ ಅವ್ಯಕ್ತದಲಿ ಕೇಶವನು
ಇನಿತು ರೂಪವ ದೇಹದೊಳು ಚಿಂ
ತನೆಯ ಗೈವ ಮಹಾತ್ಮರಿಳೆಯೊಳು
ಮನುಜರಲ್ಲವರಮರರೇ ಸರಿ ಹರಿಕೃಪಾ ಬಲದಿ ೧೯

ನೆಲದಲಿಪ್ಪನು ಕೃಷ್ಣರೂಪದಿ
ಜಲದೊಳಿಪ್ಪನು ಹರಿಯೆನಿಸಿ ಶಿಖಿ
ಯೊಳಗೆ ಇಪ್ಪನು ಪರಶುರಾಮನುಪೇಂದ್ರನೆಂದೆನಿಸಿ
ಎಲರೊಳಿಪ್ಪ ಜನಾರ್ದನನು ಬಾಂ
ದಳದೊಳಚ್ಯುತ ಗಂಧ ನರಹರಿ
ಪೊಳೆವಧೋಕ್ಷಜ ರಸಗಳೊಳು ರಸರೂಪ ತಾನಾಗಿ ೧೦

ರೂಪ ಪುರುಷೋತ್ತಮನು ಸ್ಪರ್ಶ
ವ್ಯಾಪಕನು ಅನಿರುದ್ಧ ಶಬ್ದದಿ
ವ್ಯಾಪಿಸಿಹ ಪ್ರದ್ಯುಮ್ನ್ಯಪಸ್ವದಿ ವಾಸುದೇವನಿಹ
ತಾ ಪೊಳೆವ ವಾಯುಸ್ಥನಾಗಿ ಜ
ಯಾಪತಿಯು ಸಂಕರುಷಣನು ಸು
ಸ್ಥಾಪಕನು ಆಹಪಾವದೊಳು ದಾಮೋದರನು ಪೊಳೆವ ೧೧

ಚತುರವಿಂಶತಿ ತತ್ವದೊಳು ಶ್ರೀ
ಪತಿಯು ಅನಿರುದ್ಧಾದಿ ರೂಪದಿ
ವಿತತನಾಗಿದ್ದಖಿಳ ಜೀವರ ಸಂಹನನದೊಳಗೆ
ಪ್ರತತಿಯಿಂದದಿ ಸುತ್ತಿ ಸುತ್ತುತ
ಪಿತೃಗಳಿಗೆ ತರ್ಪಕನೆನಿಸಿಕೊಂ
ಡತುಳ ಮಹಿಮನು ಷಣ್ಣವತಿ ನಾಮದಲಿ ನೆಲಸಿಹನು ೧೨

ಚತುರವಿಂಶತಿ ತತ್ವದೊಳು ತ
ತ್ಪತಿಗಳೆನಿಸುವ ಬ್ರಹ್ಮಮುಖ ದೇ
ವತೆಗಳೊಳು ಹನ್ನೊಂದು ನೂರೈವತ್ತೆರಡು ರೂಪ
ವಿತತನಾಗಿದ್ದೆಲ್ಲ ಜೀವರ
ಜತನ ಮಾಡುವಗೋಸುಗ ಜಗ
ತ್ಪತಿಗೆ ಏನಾದರು ಪ್ರಯೋಜನವಿಲ್ಲವಿದರಿಂದ ೧೩

ಇಂದಿರಾಧವ ಶಕ್ತಿ ಮೊದಲಾ
ದೊಂದಧಿಕ ದಶ ರೂಪದಿಂದಲಿ
ಪೊಂದಿಹನು ಸಕಲೇಂದ್ರಿಯಗಳಲಿ ಪುರುಷನಾಮಕನು
ಸುಂದರಪ್ರದ ಪೂರ್ಣಜ್ಞಾನಾ
ನಂದಮಯ ಚಿದ್ದೇಹದೊಳು ತಾ
ನೊಂದರಕ್ಷಣವಗಲದಲೆ ಪರಮಾಪ್ತನಾಗಿಪ್ಪ ೨೪

ಆರಧಿಕ ದಶರೂಪದಿಂದಲಿ
ತೋರುತಿಪ್ಪನು ವಿಶ್ವಲಿಂಗ ಶ
ರೀರದೊಳು ತೈಜಸನು ಪ್ರಾಜ್ಞನು ತುರಿಯನಾಮಕನು
ಮೂರಯಿದು ರೂಪಂಗಳಿಂದಲಿ
ಈರಯಿದು ಕರಣದೊಳು ಮಾತ್ರದಿ
ಘೇರ ಶಿಖಿ ಜಲ ಭೂಮಿಯೊಳಗಿಹ ನಾತ್ಮನಾಮದಲಿ ೨೫

ಮನದೊಳಗಹಂಕಾರದಲಿ ಚಿಂ
ತನೆಯ ಮಾಳ್ಪುದು ಅಂತರಾತ್ಮನ
ಘನ ಸುತತ್ವದಿ ಪರಮ ನವ್ಯಕ್ತದಲಿ ಜ್ಞಾನಾತ್ಮ
ಇನಿತು ಪಂಚಾಶದ್ವರಣವೇ
ದ್ಯನ ಅಜಾದ್ಯೈವತ್ತು ಮೂರ್ತಿಗ
ಳನು ಸದಾ ಸರ್ವತ್ರ ದೇಹಗಳಲ್ಲ ಪೂಜಿಪುದು ೨೬

ಚತುರ ವಿಂಶತಿತತ್ವದೊಳು ತ
ತ್ಪತಿಗಳೆನಿಸುವ ಬ್ರಹ್ಮಮುಖದೇ
ವತೆಗಳೊಳು ಹದಿಮೂರುಸಾವಿರದೆಂಟು ನೂರಧಿಕ
ಚತುರ ವಿಂಶತಿ ರೂಪದಿಂದಲಿ
ವಿತತನಾಗಿದ್ದೆಲ್ಲರೊಳು ಪ್ರಾ
ಕೃತಪುರುಷನಂದದಲಿ ಪಂಚಾತ್ಮಕನು ರಮಿಸುವನು ೨೭

ಕೇಶವಾದಿ ಸುಮೂರ್ತಿದ್ವಾದಶ
ಮಾಸ ಪುಂಡ್ರಗಳಲ್ಲಿ ವೇದ
ವ್ಯಾಸನನಿರುದ್ಧಾದಿ ರೂಪಗಳಾರು ಋತುಗಳಲಿ
ವಾಸವಾಗಿಹವೆಂದು ತ್ರಿಂಶತಿ
ವಾಸರದಿ ಸತ್ಕರ್ಮಧರ್ಮ ನಿ
ರಾಶೆಯಿಂದಲಿ ಮಾಡು ಕರುಣವಬೇಡು ಕೊಂಡಾಡು ೨೮

ಲೋಷ್ಟಕಾಂಚನ ಲೋಹಶೈಲಜ
ಕಾಷ್ಟ ಮುಂತಾದಖಿಳ ಜಡ ಪರ
ಮೇಷ್ಠಿ ಮೊದಲಾದೆಲ್ಲಚೇತನರೊಳಗೆ ಅನುದಿನವು
ಚೇಷ್ಟೆಗಳ ಮಾಡಿಸುತ ತಿಳಿಸದೆ
ಪ್ರೇಷ್ಟನಾಗಿದ್ದೆಲ್ಲರಿಗೆ ಸ
ರ್ವೇಷ್ಟದಾಯಕ ಸಂತಯಿಸುವನು ಸರ್ವಜೀವರನ ೨೯

ವಾಸುದೇವನಿರುದ್ಧ ರೂಪದಿ
ಪುಂಶರೀರದೊಳಿಹನು ಸರ್ವದ
ಸ್ತ್ರೀ ಶರೀರದೊಳಿಹನು ಸಂಕರುಷಣನು ಪ್ರದ್ಯುಮ್ನ
ದ್ವಾಸುಪರ್ಣ ಶ್ರುತಿವಿನುತ ಸ
ರ್ವಾಸುನಿಲಯು ನರೇಯಣನ ಸದು
ಪಾಸನೆಯ ಗೈವವರು ಜೀವನ್ಮುಕ್ತರನಿಸುವರು ೩೦

ತನ್ನನಂತಾನಂತ ರೂಪ ಹಿ
ರಣ್ಯಗರ್ಭಾದಿಗಳೊಳಗೆ ಕಾ
ರುಣ್ಯಸಾಗರ ಹರಹಿ ಅವರವರಖಿಳ ವ್ಯಾಪಾರ
ಬನ್ನಬಡದಲೆ ಮಾಡಿಮಾಡಿಸಿ
ಧನ್ಯರೆನಿಸಿ ಸಮಸ್ತ ದಿವಿಜರ
ಪುಣ್ಯಕರ್ಮವ ಸ್ವೀಕರಿಸಿ ಫಲವಿತ್ತು ಪಾಲಿಸುವ ೧೩

ಸಾಗರದೊಳಿಹ ನದಿಯ ಜಲ ಭೇ
ದಾಗಸದೊಳಿಪ್ಪಬ್ದ ಬಲ್ಲುದು
ಕಾಗೆಗುಬ್ಬಿಗಳರಿಯ ಬಲ್ಲವೆ ನದಿಯ ಜಲಸ್ಥಿತಿಯ
ಭೋಗಿವರ ಪರಿಯಂಕಶಯನ ನೊ
ಳೀಗುಣತ್ರಯಬದ್ಧ ಜಗವಿಹು
ದಾಗಮಜ್ಞರು ತಿಳಿವರಜ್ಞಾನಿಗಳಿಗಳವಡದು ೩೨

ಕರಣಗುಣ ಭೂತಗಳೊಳಗೆ ತ
ದ್ವರರೆನಿಪ ಬ್ರಹ್ಮಾದಿ ದಿವಿಜರೊ
ಳರಿತು ರೂಪಚತುಷ್ಟಯಗಳನುದಿನದಿ ಸರ್ವತ್ರ
ಸ್ಮರಿಸುತನುಮೋದಿಸುತ ಹಿಗ್ಗುತ
ಪರವಶದಿ ಪಾಡುವವರಿಗೆ ತ
ನ್ನಿರವ ತೋರಿಸಿ ಭವವಿಮುಕ್ತರ ಮಾಡಿ ಪೋಷಿಸುವ ೩೩

ಮೂಲರೂಪನು ಮನದೊಳಿಹ ಶ್ರವ
ಣಾಲಿಯೊಳಗಿಹ ಮತ್ಸ್ಯ ಕೂರ್ಮನು
ಕೋಲರೂಪನು ತ್ವಗ್ರಸನದೊಳಗಿಪ್ಪ ನರಸಿಂಹ
ಬಾಲವಟು ವಾಮನನು ನಾಸಿಕ
ನಾಳದೊಳು ವದನದಲಿ ಭಾರ್ಗವ
ವಾಲಿಭಂಜನ ಹಸ್ತದಲಿ ಪಾದದಲಿ ಶ್ರೀಕೃಷ್ಣ ೩೪

ಜನವಿಮೋಹಕ ಬುದ್ಧ ಪಾಯುಗ
ದನುಜಮರ್ದನ ಕಲ್ಕಿ ಮೇಢ್ರದ
ಲಿನಿತು ದಶರೂಪಗಳ ದಶ ಕರಣಂಗಳಲಿ ತಿಳಿದು
ಅನುಭವಿಪ ವಿಷಯಗಳ ಕೃಷ್ಣಾ
ರ್ಪಣವೆನಲು ಕೈಕೊಂಬ ವೃಜಿನಾ
ರ್ದನ ವರಜಗನ್ನಾಥವಿಠ್ಠಲ ವಿಶ್ವವ್ಯಾಪಕನು ೩೫

ಅಂತು ಸಂಧಿ ೬ಕ್ಕೆ ಪದಗಳು ೧೮೧ಕ್ಕೆ ಮಂಗಳಂ

ಶ್ರೀಕೃಷ್ಣಾರ್ಪಣಮಸ್ತು

## ಸಂಧಿ ೭ 'ಪಂಚತನ್ಮಾತ್ರಾ ಸಂಧಿ'

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಭೂಸಲಿಲ ಶಿಖಿ ಪವನ ಭೂತಾ
ಕಾಶದೊಳಗೈದೈದು ತನ್ಮಾ
ತ್ರಾಸಹಿತ ಒಂದಧಿಕ ಪಂಚಾಶದ್ವರಣ ವೇದ್ಯ
ಈ ಶರೀರದಿ ವ್ಯಾಪಿಸಿದ್ದು ಸು
ರಾಸುರರಿಗೆ ನಿರಂತರದಲಿ ಸು
ಖಾಸುಖ ಪ್ರದನಾಗಿ ಆಡುವ ದ್ವೇಷಿಪರ ಬಡಿವ ೧

ಪ್ರಣವ ಪ್ರತಿಪಾದ್ಯ ತ್ರಿನಾಮದಿ
ತನುವಿನೊಳು ತ್ರಿಸ್ಥಾನಗನಿಸು
ದ್ಧನು ತ್ರಿಪಂಚಕ ಏಕವಿಂಶತಿ ಚತುರವಿಂಶತಿಗ
ಎನಿಸಿ ಎಪ್ಪತ್ತೆರಡು ಸಾವಿರ
ವಿನಿತು ನಾಡಿಗಳೊಳು ನಿಯಾಮಿಸು
ತಿನಗಭಸ್ತಿಗ ಲೋಕದೊಳು ಸರ್ವತ್ರ ಬೆಳಗುವನು ೨

ಜೀವಲಿಂಗನಿರುದ್ಧ ಸ್ಥೂಲ ಕ
ಳೇವರಗಳೊಳು ವಿಶ್ವ ತುರಗ
ಗ್ರೀವ ಮೂಲೇಶಾಚ್ಯುತತ್ರಯ ಹಂಸಮೂರ್ತಿಗಳ
ಈವಿಧ ಚತುಸ್ಥಾನದಲಿ ಶಾಂ
ತೀವರನ ಈರೆರಡು ರೂಪದಿ
ಭಾವಿಸುವುದೇಕೋನವಿಂಶತಿ ಮೂರ್ತಿಸರ್ವತ್ರ ೩

ಕಲುಷ ವಿಲ್ಲದ ದರ್ಪಣದಿ ಪ್ರತಿ
ಫಲಿಸಿ ಸರ್ವಪದಾರ್ಥಗಳು ಕಂ
ಗೊಳಿಸುವಂದದಿ ಬಿಂಬ ಜಡಚೇತನಗಳೊಳಗಿದ್ದು
ಪೊಳವ ಬಹುರೂಪದಲಿ ಸಜ್ಜನ
ರೊಳಗೆ ಮನದರ್ಪಣದಿ ತಾನಿ
ಶ್ಚಲನಿರಾಮಯ ನಿರ್ವಿಕಾರ ನಿರಾಶ್ರಯಾನಂತ ೪

ಈಶರೀರ ಚತುಷ್ಟಯಗಳೊಳು
ಕೋಶಧಾತುಗ ಳಾಂತಿಪ ಪ್ರಾ
ಣೇಶ ನಿಪ್ಪತ್ತೊಂದುಸಾವಿರದಾರುನೂರೆನಿಪ
ಶ್ವಾಸ ರೂಪಕ ಹಂಸಭಾಸ್ಕರ
ಭೇಶರೊಳಗಿದ್ದವರ ಕೃಪಿಡಿ
ದೀಸರೋಜ ಭವಾಂಡದೊಳು ಸರ್ವತ್ರ ತುಂಬಿಹನು ೫

ಶಿರಗಳೈದೈದೆರಡು ಬಾಹುಗ
ಳೆರಡು ಪಾದಗಳೊಂದು ಮಧ್ಯೋ
ದರದಿ ಶೋಭಿಪ ವಾಙ್ಮನೋಮಯನೆನಿಪ ನಿತ್ಯದಲಿ
ಕರಣಧಾತುಗಳಲ್ಲಿ ಎಪ್ಪ
ತ್ತೆರಡುಸಾವಿರ ನಾಡಿಗಳೊಳಿ
ಪ್ಪರವಿದೂರನು ಭಾರತ ಪ್ರತಿಪಾದ್ಯನೆಂದೆನಿಸಿ ೬

ಈರೆರಡು ದೇಹೋರ್ವಿಭೂತಗ
ಳಾರಧಿಕ ದಶರುಗ್ವಿನುತ ಲ
ಕ್ಷ್ಮೀರಮಣ ವಿಷ್ಣ್ವಾಖ್ಯ ರೂಪದಿ ಚತುಷ್ಟಷ್ಟಿಕಳಾ
ಧಾರಕನು ತಾನಾಗಿ ಬ್ರಹ್ಮಪು
ರಾರಿ ಮುಖ್ಯರೊಳಿದ್ದು ಸತತ ವಿ
ಹಾರ ಮಾಳ್ಪನು ಚತುಷ್ಪಾದಾಹ್ವಯದಿ ಲೋಕದೊಳು ೭

ತೃಣ ಮೊದಲು ಬ್ರಹ್ಮಾಂತ ಜೀವರ
ತನುಚತುಷ್ಟಯಗಳಲಿ ನಾರಾ
ಯಣನ ಸಾವಿರದೈದುನೂರಿಪ್ಪತ್ತು ಮೇಲಾರು
ಗಣನೆ ಮಾಳ್ಪರು ಬುಧರು ರೂಪವ
ಘೃಣಿಯು ಸೂರ್ಯಾದಿತ್ಯ ನಾಮಗ
ಳನುದಿನದಿ ಜಪಿಸುವರಿಗೀವಾರೋಗ್ಯಸಂಪದವ ೮

ಐದು ನೂರಪ್ಪತ್ತು ನಾಲಕು
ಆದಿ ಭೌತಿಕದಲ್ಲಿ ತಿಳಿವುದು
ಐದೆರಡು ಶತ ಏಕವಿಂಶತಿ ರೂಪವಧ್ಯಾತ್ಮ
ಭೇದಗಳಲಿನ್ನೂರ ಮೂವ
ತ್ತಾದ ಮೇಲೊಂದಧಿಕ ಮೂರ್ತಿಗ
ಳಾದರದಿ ಅಧಿದೈವದೊಳು ಚಿಂತಿಪುದು ಭೂಸುರರು ೯

ಸುರುಚಿಶಾರ್ವರಿಕರನೆನಿಸಿ ಸಂ
ಕರುಷಣ ಪ್ರದ್ಯುಮ್ನ ಶಶಿ ಭಾ
ಸ್ಕರರೊಳಗೆ ಆರವತ್ತಧಿಕ ಮುನ್ನೂರು ರೂಪದಲಿ
ಕರೆಸಿಕೊಂಬನು ಅಹಸು ಸಂವ
ತ್ಸರನೆನಿಪನು ವಿಶಿಷ್ಟನಾಮದ
ಲರಿತವರಿಗಾರೋಗ್ಯಭಾಗ್ಯವ ನೀವನಂದಮಯ ೧೦

ಏಕ ಪಂಚಾಶದ್ವರಣ ಗತ
ನಾಕಳತ್ರನು ಸರ್ವರೊಳಗ
ವ್ಯಾಕೃತಾಕಾಶಾಂತ ವ್ಯಾಪಿಸಿ ನಿಗಮತತಿಗಳನು
ವ್ಯಾಕರಣ ಭಾರತ ಮುಖಾದ್ಯಾ
ನೇಕ ಶಾಸ್ತ್ರಪುರಾಣ ಭಾಷಾ
ನೀಕಗಳ ಕಲ್ಪಿಸಿ ಮನೋವಾಙ್ಮಯನೆನಿಸಿಕೊಂಬ ೧೧

ಭಾರಭೃನ್ನಾಮಕನ ಸಾವಿರ
ದಾರುನೂರಿಪ್ಪತ್ತು ನಾಲಕು
ಮೂರುತಿಗಳು ಚರಾಚರದಿ ಸರ್ವತ್ರ ತುಂಬಿಹುವು
ಆರುನಾಲಕು ಜಡಗಳಲಿ ಹದಿ
ನಾರು ಚೇತನಗಳಲಿ ಚಿಂತಿಸೆ
ಕೋರಿಕೊಂಬನು ತನ್ನ ರೂಪವ ಸರ್ವರಾವಿನಲಿ ೧೨

ಮಿಸುಣಿ ಮೇಲಣ ಮಣಿಯವೋಲ್ ರಾ
ಜಿಸುವ ಬ್ರಹ್ಮಾದಿಗಳ ಮನದಲಿ
ಬಿಸಜಜಾಂಡಾಧಾರಕನು ಆಧೇಯನೆಂದೆನಿಸಿ
ದ್ವಿಶತ ನಾಲ್ವತ್ತೆರಡು ರೂಪದಿ
ಶಶಿಯೊಳಿಪ್ಪನು ಶಶದೊಳಗೆ ಶೋ
ಭಿಸುವ ನಾಲ್ವತ್ತೆರಡಧಿಕ ಶತರೂಪದಲಿ ಬಿಡದೆ ೧೩

ಎರಡುಸಾವಿರ ದೆಂಟುರೂಪವ
ನರಿತು ಸರ್ವಪದಾರ್ಥದಲಿ ಸಿರಿ
ವರನ ಪೂಜೆಯಮಾಡು ವರಗಳಬೇಡು ಕೊಂಡಾಡು
ಒರಿದೆ ಜಲದಲಿ ಮುಳುಗಿ ಬಿಸಿಲೊಳು
ಬೆರಳನೆಣಿಸಿದರೇನು ಸದ್ಗುರು
ಹಿರಿಯರನುಸರಿಸಿರದೆ ಮರ್ಮವನರಿಯದಿಹ ನರನು ೧೪

ಮತ್ತೆ ಚಿದ್ದೇಹದ ಒಳಗೆ ಎಂ
ಭತ್ತು ಸಾವಿರ ದೇಳುನೂರಿ
ಪ್ಪತ್ತು ಐದು ನೃಸಿಂಹ ರೂಪದಲಿದ್ದು ಜೀವರಿಗೆ
ನಿತ್ಯದಲಿ ಹಗಲಿರುಳು ಬಪ್ಪಪ
ಮೃತ್ಯುವಿಗೆ ತಾಮೃತ್ಯುವೆನಿಸುವ
ಭೃತ್ಯವತ್ಸಲ ಭಯವಿನಾಶನ ಭಾಗ್ಯಸಂಪನ್ನ ೧೫

ಜ್ವರನೊಳಿಪ್ಪತ್ತೇಳು ಹರನೊಳ
ಗಿರುವ ನಿಪ್ಪತ್ತೆಂಟು ರೂಪದಿ
ಎರಡು ಸಾವಿರದೆಂಟು ನೂರಿಪ್ಪತ್ತು ಏಳೆನಿಪ
ಜ್ವರಹರಾಹ್ವಯ ನಾರಸಿಂಹನ
ಸ್ಮರಣೆ ಮಾತ್ರದಿ ದುರಿತ ರಾಶಿಗ
ಳಿರದೆ ಪೋಪುವು ತರಣಿಬಿಂಬವ ಕಂಡಹಿಮದಂತೆ ೧೬

ನೂಸಪರಿಯಂತರವು ಬಿಡದೆ ನೃ
ಕೇಸರಿಯ ಶುಭನಾಮಮಂತ್ರ ಜಿ
ತಾಸನದಲೇಕಾಗ್ರ ಚಿತ್ತದಿ ನಿಷ್ಕಪಟದಿಂದ
ಬೇಸರದೆ ಜಪಿಸಲು ವೃಜಿನಗಳ
ನಾಶಗೈಸಿ ಮನೋರಥಗಳ ಪ
ರೇಶ ಪೂರ್ತಿಯ ಮಾಡಿಕೊಡುವನು ಕಡೆಗೆ ಸರಗತಿಯ ೧೭

ಚತುರ ಮೂರ್ತ್ಯಾತ್ಮಕ ಹರಿಯು ತ್ರಿಂ
ಶತಿಸುರೂಪದಿ ಬ್ರಹ್ಮನೊಳು ಮಾ
ರುತನೊಳಿಪ್ಪತ್ತೇಳು ರೂಪದೊಳಿಪ್ಪ ಪ್ರದ್ಯುಮ್ನ
ಸುತರೊಳಿಪ್ಪತ್ತೈದು ಹದಿನೆಂ
ಟತುಳರೂಪಗಳರಿತು ವತ್ಸರ
ಶತಗಳಲಿ ಪೂಜಿಸುತಲಿರು ಚತುರಾತ್ಮಕನ ಪದವ ೧೮

ನೂರುವರುಷಕೆ ದಿವಸ ಮೂವ
ತ್ತಾರು ಸಾವಿರವಹುವು ನಾಡಿಶ
ರೀರ ದೊಳಗಿನಿತಿಹುವು ಸ್ತ್ರೀಪುಂಭೇದದಲಿ ಹರಿಯ
ಈರದಿಕ ಎಪ್ಪತ್ತು ಸಾವಿರ
ಮೂರುತಿಗಳನೆ ನೆನೆದು ಸರ್ವಾ
ಧಾರಕನ ಸರ್ವತ್ರ ಪೂಜಿಸು ಪೂರ್ಣನೆಂದರಿದು ೧೯

ಕಾಲ ಕರ್ಮಗುಣ ಸ್ವಭಾವಗ
ಳಾಲಯನು ತಾನಾಗಿ ಲಕುಮಿ
ಲೋಲ ತತ್ತದ್ರೂಪನಾಮದಿ ಕರೆಸುತೊಳಗಿದ್ದು
ಲೀಲೆಯಿಂದಲಿ ಸರ್ವಜೀವರ
ಪಾಲಿಸುವ ಸಂಹರಿಪ ಸೃಷ್ಟಿಪ
ಮೂಲಕಾರಣ ಪ್ರಕೃತಿ ಗುಣಕಾರ್ಯಗಳ ಮನೆಮಾಡಿ ೨೦

ತಿಲಜವರ್ತಿಗಳನುಸರಿಸಿ ಪ್ರ
ಜ್ವಲಿಸಿ ದೀಪಗಳಾಲಯದ ಕ
ತ್ತಲೆಯ ಭಂಗಿಸಿ ತದ್ಗತಾರ್ಥನ ತೋರುವಂದದಲಿ
ಜಲರುಹೇಕ್ಷಣ ತನ್ನವರ ಮನ
ದೊಳಗೆ ಭಕ್ತಿಜ್ಞಾನ ಕರ್ಮಕೆ
ಒಲಿದು ಪೊಳವುತ ತೋರುವನು ಗುಣರೂಪ ಕ್ರಿಯೆಗಳನು ೨೧

ಆವ ದೇಹವ ಕೊಡಲಿ ಹರಿ ಮ
ತ್ತಾವ ಲೋಕದಲಿಡಲಿ ತಾ ಮ
ತ್ತಾವ ದೇಶದೊಳಿರಲಿ ಆವಾವಸ್ಥೆಗಳು ಬರಲಿ
ಈ ವಿಧದಿ ಜಡ ಚೇತನದೊಳು ಪ
ರಾವರೇಶನ ರೂಪ ಗುಣಗಳ
ಭಾವಿಸುತ ಸುಜ್ಞಾನ ಭಕುತಿಯ ಬೇಡು ಕೊಂಡಾಡು ೨೨

ಒಂದರೊಳಗೊಂದೊಂದು ಬೆರದಿಹ
ಇಂದಿರೇಶನ ರೂಪಗಳ ಮನ
ಬಂದ ತೆರದಲಿ ಚಿಂತಿಸಿದಕನುಮಾನವಿನಿತಿಲ್ಲ
ಸಿಂಧು ರಾಜನೊಳಂಬಗಾಲಯ
ಬಂಧಿಸಲು ಪ್ರತಿತಂತುಗಳೊಳುದ
ಬಿಂದು ವ್ಯಾಪಿಸಿದಂತೆ ಇರುತಿಪ್ಪನು ಚರಾಚರದಿ ೨೩

ಒಂದು ರೂಪದೊಳೊಂದವಯವದೊ
ಳೊಂದು ರೋಮದೊಳೊಂದು ದೇಶದಿ
ಪೊಂದಿಯಿಪ್ಪವಜಾಂಡನಂತಾನಂತ ಕೋಟಿಗಳು
ಹಿಂದೆ ಮಾರ್ಕಂಡೇಯ ಕಾಣನೆ
ಒಂದೆ ರೂಪದಿ ಸೃಷ್ಟಿ ಪ್ರಳಯಗ
ಳಿಂದಿರೇಶನೊಳಿನಿದಚ್ಚರಿಯುಪ್ರಮೇಯ ಸದಾ ೨೪

ಒಂದನಂತಾನಂತ ರೂಪಗ
ಳೊಂದು ರೂಪದಲಿಹವು ಲೋಕಗ
ಳೊಂದೆರೂಪದಿ ಸೃಷ್ಟಿ ಸ್ಥಿತಿ ಮೊದಲಾದ ವ್ಯಾಪಾರ
ಒಂದೆಕಾಲದಿ ಮಾಡಿ ತಿಳಿಸದೆ
ಸಂದಣಿಸಿಕೊಂಡಿಪ್ಪ ಜಗದೊಳು
ನಂದನಂದನ ರಣದೊಳಿಂದ್ರಾತ್ಮಜಗೆ ತೋರಿಸನೆ ೨೫

ಶ್ರೀ ರಮೇಶನಮೂರ್ತಿಗಳು ನವ
ನಾರಿ ಕುಂಜರದಂತೆ ಏಕಾ
ಕಾರ ತೋರ್ಪವು ಅವಯವಾಹ್ವಯವವಯವಗಳಲ್ಲ
ಬೇರ ಬೇರೆಯೆ ಕಂಗೊಳಿಸುವ ಶ
ರೀರದೊಳು ನಾನಾಪ್ರಕಾರ ವಿ
ಕಾರ ಶೂನ್ಯ ವಿರಾಟನೆನಿಸುವ ಪದುಮ ಜಾಂಡದೊಳು ೨೬

ವಾರಿಜಭವಾಂಡದೊಳು ಲಕುಮೀ
ನಾರಸಿಂಹನ ರೂಪ ಗುಣಗಳು
ವಾರಿಧಿಯೊಳಿಹ ತೆರೆಗಳಂದದಿ ಸಂದಣಿಸಿ ಇಹವು
ಕಾರಣಾಂಶಾವೇಶ ವ್ಯಾಪ್ತವ
ತಾರ ಕಾರ್ಯಾವ್ಯಕ್ತವ್ಯಕ್ತವು
ಆರುನಾಲ್ಕು ವಿಭೂತಿಯಂತರ್ಯಾಮಿ ರೂಪಗಳು ೨೭

ಮಣಿಗಳೊಳಗಿನ ಸೂತ್ರದಂದದಿ
ಪ್ರಣವಪಾದ್ಯನು ಚೇತನಾ ಚೇ
ತನ ಜಗತ್ತಿನೊಳನುದಿನದೊಳಾಡುವನು ಸುಖಪೂರ್ಣ
ದಣುನಿಕೆಯು ಇವಗಿಲ್ಲ ಬಹು ಕಾ
ರುಣಿಕನಂತಾನಂತ ಜೀವರ
ಗಣದೊಳೇಕಾಂಶಾಂಶರೂಪದಿ ನಿಂತು ನೇಮಿಸುವ ೨೮

ಜೀವ ಜೀವರ ಭೇದ ಜಡ ಜಡ
ಜೀವ ಜಡ ಜಡ ಜೀವರಿಂದಲಿ
ಶ್ರೀವರನು ಅತ್ಯಂತ ಭಿನ್ನವಿಲಕ್ಷಣನು ಲಕ್ಷ್ಮಿ
ಮೂವರಿಂದಲಿ ಪದುಮ ಜಾಂಡದಿ
ತಾ ವಿಲಕ್ಷಣಳೆನಿಸುತಿಪ್ಪಳು
ಸಾವಧಿಕ ಸಮಶೂನ್ಯಳೆಂದರಿ ಶ್ರೀವರನನು ಭಜಿಸು ೯

ಆದಿತೇಯರು ತಿಳಿಯದಿಹ ಗುಣ
ವೇದಮಾನಿಗಳೆಂದೆನಿಪ ವಾ
ಣ್ಯಾದಿಗಳು ಬಲ್ಲರವರರಿಯದ ಗುಣಗಣಂಗಳನು
ವೇಧಬಲ್ಲನು ಬೊಮ್ಮನರಿಯದ
ಗಾಧ ಗುಣಗಳು ಲಕುಮಿ ಬಲ್ಲಳು
ಶ್ರೀಧರೊಬ್ಬನುಪಾಸ್ಯ ಸದ್ಗುಣ ಪೂರ್ಣಹರಿಯೆಂದು ೩೦

ಇಂತನಂತಾನಂತ ಗುಣಗಳ
ಪ್ರಾಂತಗಾಣದೆ ಮಹಲಕುಮಿ ಭಗ
ವಂತಗಾಭರಣಾಯುಧಾಂಬರ ವಾಲಯಗಳಾಗಿ
ಸ್ವಾಂತದಲಿ ನೆಲೆಗೊಳಿಸಿ ಪರಮ ದು
ರಂತ ಮಹಿಮನ ದೌತ್ಯ ಕರ್ಮ ನಿ
ರಂತರದಿ ಮಾಡುತಲಿ ತದಧೀನತ್ವವೈದಿದಳು ೩೧

ಪ್ರಳಯ ಜಲಧಿಯೊಳುಳ್ಳ ನಾವೆಯು
ಹೊಲಬುಗಾಣದೆ ಸುತ್ತುವಂದದಿ
ಜಲರುಹೇಕ್ಷಣ ನಮಲಗುಣ ರೂಪಗಳ ಚಿಂತಿಸುತ
ನೆಲೆಯುಗಾಣದೆ ಮಹಲಕುಮಿ ಚಂ
ಚಲವನೈದಿಹಳಲ್ಪಜೀವರಿ
ಗಳವಡುವುದೇನಿವನ ಮಹಿಮೆಗಳೀ ಜಗತ್ರಯದಿ ೩೨

ಶ್ರೀನಿಕೇತನ ಸಾತ್ವತಾಂ ಪತಿ
ಜ್ಞಾನಗಮ್ಯಗಯಾಸುರಾರ್ದನ
ಮೌನಿ ಕುಲಸನ್ಮಾನ್ಯ ಮಾನದ ಮಾತುಳ ಧ್ವಂಸಿ
ದೀನ ಜನಮಂದಾರ ಮಧುರಿಪು
ಪ್ರಾಣದ ಜಗನ್ನಾಥ ವಿಠ್ಠಲ
ತಾನೆಗತಿಯೆಂದನುದಿನದಿ ನಂಬಿದವರನು ಪೊರವ ೩೩

ಅಂತು ಸಂಧಿ ೭ಕ್ಕೆ ಪದಗಳು ೨೧೪ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು



# ಸಂಧಿ ೮ "ಮಾತೃಕಾ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಪಾದಮಾನಿ ಜಯಂತನೊಳಗೆ ಸು
ಮೇಧ ನಾಮಕನಿಪ್ಪ ದಕ್ಷಿಣ
ಪಾದ ದಂಗುಟದಲ್ಲ ಪವನನು ಭಾರ ಭೃದ್ರೂಪ
ಕಾದುಕೊಂಡಿಹ ಟಂಕಿತರ ವೊದ
ಲಾದ ನಾಮದಿ ಸಂಧಿಗಳಲೀ
ರ್ವದು ರೂಪದಲಿದ್ದು ಸಂತತ ನಡೆದು ನಡೆಸುತಲಿ ೧

ಕಪಿಲ ಚಾರ್ವಾಂಗಾದಿ ರೂಪದಿ
ವಪುಗಳೊಳು ಹಸ್ತಗಳ ಸಂಧಿಯೊ
ಳಪರಿಮಿತ ಕರ್ಮಗಳ ಮಾಡುತಲಿಪ್ಪ ದಿನದಿನದಿ
ಕೃಪಣವತ್ಸಲ ಪಾರ್ಶ್ವದೊಳು ಪರ
ಸುಫಲಿಯೆನಿಸುವ ಗುದ ಉಪಸ್ಥದಿ
ವಿಪುಳ ಬಲಿಭಗ ಮನವೆನಿಸಿ ತುಂದಿಲೊಳಗಿರುತಿಹನು ೨

ಐದು ಮೇಲೊಂದಧಿಕ ದಳವು
ಳ್ಳೈದು ಪದ್ಮವು ನಾಭಿ ಮೂಲದಿ
ಐದು ಮೂರ್ತಿಗಳಿಹವು ಅನಿರುದ್ಧಾದಿ ನಾಮದಲಿ
ಐದಿಸುತ ಗರ್ಭವನು ಜೀವರ
ನಾದಿಕರ್ಮ ಪ್ರಕೃತಿ ಗುಣಗಳ
ಹಾದಿತಪ್ಪಲಿಗೊಡದೆ ವ್ಯಾಪಾರಗಳ ಮಾಡುತಿಹ ೩

ನಾಭಿಯಲಿ ಷಟ್ಕೋಣಮಂಡಲ
ದೀಭವಿಷ್ಯದ್ಬ್ರಹ್ಮನೊಳು ಮು
ಕ್ತಾಭ ಶ್ರೀ ಪ್ರದ್ಯುಮ್ನನಿಪ್ಪನು ವಿಬುಧ ಗಣಸೇವ್ಯ
ಶೋಭಿಸುತ ಕೌಸ್ತುಭವೆ ವೊದಲಾ
ದಾಭರಣ ವಾಯುಧಗಳಿಂದ ಮ
ಹಾಭಯಂಕರ ಪಾಪ ಪುರುಷನ ಶೋಷಿಸುತ ನಿತ್ಯ ೪

ದ್ವಾದಶಾರ್ಕರ ಮಂಡಲವು ಮು
ಧ್ಯೋದರದೊಳು ಸುಷುಮ್ನದೊಳಗಿಹು
ದೈದು ರೂಪಾತ್ಮಕನು ಅರವತ್ತಧಿಕ ಮುನ್ನೂರು
ಈ ದಿವಾರಾತ್ರಿಗಳ ಮಾನಿಗ
ಳಾದ ದಿವಿಜರ ಸಂತಯಿಸುತ ನಿ
ಷಾಧರೂಪಕ ದೈತ್ಯರನು ಸಂಹರಿಪ ನಿತ್ಯದಲಿ ೫

ಹೃದಯದೊಳಗಿಹುದಷ್ಟದಳ ಕಮ
ಲದರೊಳಗೆ ಪ್ರಾದೇಶನಾಮಕ
ನುದಿತ ಭಾಸ್ಕರನಂತೆ ತೋರ್ಪನು ಬಿಂಬನೆಂದೆನಿಸಿ
ಪದುಮ ಚಕ್ರ ಸುಶಂಖ ಸುಗದಾಂ
ಗದ ಕಟಕ ಮಕುಟಾಂಗುಲೀಯಕ
ಪದಕ ಕೌಸ್ತುಭಹಾರ ಗ್ರೈವೇಯಾದಿ ಭೂಷಿತನು ೬

ದ್ವಿದಳ ಪದ್ಮವು ಶೋಭಿಪುದು ಕಂ
ಠದಲಿ ಮುಖ್ಯಪ್ರಾಣ ತನ್ನಯ
ಸುದತಿಯಿಂದೊಡಗೂಡಿ ಹಂಸೋಪಾಸನೆಯ ಮಾಳ್ಪ
ಉದಕವನ್ನಾದಿಗಳಿಗವಕಾ
ಶದನು ತಾನಾಗಿದ್ದು ದಾನಾ
ಭಿದನು ಶಬ್ದವನು ನುಡಿದು ನುಡಿಸುವ ಸರ್ವಜೀವರೊಳು ೭

ನಾಸಿಕದಿ ನಾ ಸತ್ಯದಸ್ರರು
ಶ್ವಾಸಮಾನಿ ಪ್ರಾಣಭಾರತಿ
ಹಂಸ ಧನ್ವಂತ್ರಿಗಳು ಅಲ್ಲಲ್ಲಿಪ್ಪರವರೊಳಗೆ
ಭೇಶ ಭಾಸ್ಕರರಕ್ಷಿಯುಗಳಕ
ಧೀಶರನಿಪರು ಅವರೊಳಗೆ ಲ
ಕ್ಷ್ಮೀಶ ದಧಿವಾಮನರು ನಿಯ್ಯಾಮಿಸುತಲಿಶುತಿಹರು ೮

ಸ್ತಂಭ ರೂಪದಲಿಪ್ಪ ದಕ್ಷಿಣ
ವಂಬಕದಿ ಪ್ರದ್ಯುಮ್ನ ಗುಣರೂ
ಪಾಂಭ್ರಣಿಯು ತಾನಾಗಿ ಇಪ್ಪಳು ವತ್ಸರೂಪದಲಿ
ಪೊಂಬಸುರ ಪದಯೋಗ್ಯ ಪವನತ್ರಿ
ಯಂಬಕಾದಿ ಸಮಸ್ತದಿವಿಜಕ
ದಂಬ ಸೇವಿತನಾಗಿ ಸರ್ವಪದಾರ್ಥಗಳ ತೋರ್ಪ ೯

ನೇತ್ರಗಳಲಿ ವಸಿಷ್ಠ ವಿಶ್ವಾ
ಮಿತ್ರ ಭಾರದ್ವಾಜ ಗೌತಮ
ನತ್ರಿಯಾಜಮದಗ್ನಿ ನಾಮಗಳಿಂದ ಕರೆಸುತಲಿ
ಪತ್ರತಾಪಕ ಶಕ್ರ ಸೂರ್ಯ ಧ
ರಿತ್ರಿ ಪರ್ಜನ್ಯಾದಿ ಸುರರು ಜ
ಗತ್ರಯೇಶನ ಭಜಿಪರನುದಿನ ಹರುಷ ಭಕುತಿಯಲಿ ೧೦

ಜ್ಯೋತಿಯೊಳಗಿಪ್ಪನು ಕಪಿಲ ಪುರು
ಹೂತ ಮುಖದಿಕ್ಪತಿಗಳಿಂದ ಸ
ಮೇತನಾಗಿಹ ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ
ಶ್ವೇತವರ್ಣ ಚತುರ್ಭುಜನು ಸಂ
ಪ್ರೀತಿಯಿಂದಲಿ ಸ್ಥೂಲ ವಿಷಯವ
ಚೇತನರಿ ಗುಂಡುಣಿಪ ಜಾಗ್ರತೆಯಿತ್ತು ನೃಗಜಾಸ್ಯ ೧೧

ನೆಲೆಸಿಹರು ದಿಗ್ದೇವತೆಗಳಿ
ಕ್ಕೆಲದಿ ಕರ್ಣಂಗಳಲಿ ತೀರ್ಥಂ
ಗಳಿಗೆ ಮಾನಿಗಳಾದ ಸುರನದಿ ಮುಖ್ಯ ನಿರ್ಜರರು
ಬಲದ ಕಿವಿಯಲಿ ಇರುತಿಹರು ಬಾಂ
ಬೊಳೆಯ ಜನಕ ತ್ರಿವಿಕ್ರಮನು ನಿ
ರ್ಮಲಿನದನು ಮಾಡುವನು ಈ ಪರಿ ಚಿಂತಿಸುವ ಜನರ ೧೨

ಚಿತ್ತಜೇಂದ್ರರು ಮನನೊಳಿಪ್ಪರು
ಕೃತ್ತಿವಾಸನು ಅಹಂಕಾರದಿ
ಚಿತ್ತಚೇತನ ಮಾನಿಗಳು ವಿಹಗೇಂದ್ರ ಫಣಿಸರೂಳು
ನಿತ್ಯದಲಿ ನೆಲೆಗೊಂಡು ಹತ್ತೊಂ
ಭತ್ತು ಮೊಗತೈಜಸನು ಸ್ವಪ್ನಾ
ನಷ್ಟಿಯೈದಿಸಿ ಜೀವರನ ಪ್ರವಿವಿಕ್ತ ಭುಕುಯೆನಿಸ ೧೩

ಜ್ಞಾನಮಯತೈಜಸನು ಹೃದಯ
ಸ್ಥಾನಯೈದಿಸಿ ಪ್ರಾಜ್ಞನೆಂಬಭಿ
ಧಾನದಿಂ ಕರೆಸುತ್ತ ಚಿತ್ಸುಖ ವ್ಯಕ್ತಿಯನು ಕೊಡುತ
ಆನತೇಷ್ಟಪ್ರದನು ಅನುಸಂ
ಧಾನವೀಯದೆ ಸುಪ್ತಿಯೈದಿಸಿ
ತಾನೆ ಪುನರಪಿ ಸ್ವಪ್ನ ಜಾಗ್ರತೆಯಿಾವ ಚೇತನಕ ೧೪

ನಾಲಿಗೆಯೊಳಿಹ ವರುಣ ಮತ್ಸ್ಯಣು
ನಾಲಿಗೆಯೊಳಗುಪೇಂದ್ರ ಇಂದ್ರರು
ತಾಲುಪರ್ಜನ್ಯಾಖ್ಯ ಸೂರ್ಯನು ಅರ್ಧಗರ್ಭನಿಹ
ಆಲಿಯೊಳು ವಾಮನ ಸುಭಾಮನ
ಫಾಲದೊಳು ಶಿವ ಕೇಶವನು ಸುಕ
ಪೋಲದೊಳಗೆ ರತೀಶ ಕಾಮನು ಅಲ್ಲೆ ಪ್ರದ್ಯುಮ್ನ ೧೫

ರೋಮಗಳಲಿ ವಸಂತ ತ್ರಿಕಕು
ದ್ಧಾಮ ಮುಖದೊಳಗಗ್ನಿ ಭಾರ್ಗವ
ತಾಮರಸಭವ ವಾಸುದೇವರು ಮಸ್ತಕದೊಳಿಹರು
ಈ ಮನದೊಳಿಹ ವಿಷ್ಣು ಶಿಖದೊಳು
ಮಾಮಹೇಶ್ವರ ನಾರಸಿಂಹ
ಸ್ವಾಮಿ ತನ್ನನುದಿನದಿ ನೆನೆವರ ಮೃತ್ಯು ಪರಿಹರಿಸ ೧೬

ಮೌಳಿಯಲ್ಲಿಹ ವಾಸುದೇವನು
ಏಳಧಿಕ ನವಜಾದಿರೂಪವ
ತಾಳಿ ಮುಖದೊಳು ನಯನ ಶ್ರವಣಾದ್ಯವಯವಂಗಳಲಿ
ಆಳರಸು ತಾನಾಗಿ ಸತತ ಸು
ಲೀಲೆಗೈಯುತಲಿಪ್ಪ ಸುಖಮಯ
ಕೇಳಿ ಕೇಳಿಸಿ ನೋಡಿ ನೋಡಿಸಿ ನುಡಿದು ನುಡಿಸುತಲಿ ೧೭

ಎರಡಧಿಕ ಎಪ್ಪತ್ತೆನಿಪ ಸಾ
ವಿರದ ನಾಡಿಗೆ ಮುಖ್ಯ ಏಕೋ
ತ್ತರ ಶತಂಗಳಲಿಹವು ನೂರಾವೊಂದು ಮೂರ್ತಿಗಳು
ಅರಿತು ದೇಹದಿ ಕಲಶನಾಮಕ
ಹರಿಗೆ ಕಳಗಳೆಂದು ನೈರಂ
ತರದಿ ಪೂಜಿಸುತಿಹರು ಪರಮಾದರದಿ ಭೂಸುರರು ೧೮

ಇದಕೆ ಕಾರಣವೆನಿಸುವುವು ಎರ
ಡಧಿಕ ದಶನಾಡಿಗಳೊಳಗೆ ಸುರ
ನದಿಯು ಮೊದಲಾದಖಿಳ ತೀರ್ಥಗಳಿಹುವು ಕರ್ಣದಲಿ
ಪದುಮನಾಭನು ಕೇಶವಾದಿ
ದ್ವಿದಶ ರೂಪದಲಿಪ್ಪ ನಲ್ಲತಿ
ಮೃದುಳ ಪಾದ ಸುಷುಮ್ನದೊಳಗೇಕಾತ್ಮನೆನಿಸುವನು ೧೯

ಆಮ್ನಾಯ ಪ್ರತಿಪಾದ್ಯ ಶ್ರೀ ಪ್ರ
ದ್ಯುಮ್ನದೇವನು ದೇಹದೊಳಗೆ ಸು
ಷುಮ್ನದೀಡಾಪಿಂಗಳದಿ ವಿಶ್ವಾದಿರೂಪದಲಿ
ನಿರ್ಮಲಾತ್ಮನು ಪಾಣಿ ಪಾಯು ಚ
ತುರ್ಮುಖರೊಳಿದ್ದಖಿಳ ಜೀವರ
ಕರ್ಮಗುಣವನುಸರಿಸಿ ನಡೆವನು ವಿಶ್ವವ್ಯಾಪಕನು ೨೦

ಅಬ್ದಯನ ಋತುಮಾಸ ಪಕ್ಷ ಸು
ಶಬ್ದದಿಂದಲಿ ಕರೆಸುತಲಿ ನೀ
ಲಾಬ್ಜ ವರ್ಣಾನಿರುದ್ಧ ಮೊದಲಾದೈದು ರೂಪದಲಿ
ಹಬ್ಬಿಹನು ಸರ್ವತ್ರದಲಿ ಕರು
ಣಾಬ್ಧಿ ನಾಲ್ವತ್ತೈದುರೂಪದಿ
ಲಬ್ಧನಾಗುವ ನೀಪರಿಯ ಧೇನಿಸುವ ಭಕ್ತರಿಗೆ ೨೧

ಐದು ರೂಪಾತ್ಮಕನು ಇಪ್ಪ
ತ್ತೈದು ರೂಪದಲಿಪ್ಪ ಮತ್ತದಿ
ನ್ನೈದು ತಿಥಿ ಇಪ್ಪತ್ತು ನಾಲಕರಿಂದ ಪೆಚ್ಚಿಸಲು
ಐದುವುದು ಅರವತ್ತಧಿಕ ವಾ
ರೈದು ದಿವಸಾಹ್ವಯನೊಳಗೆ ಮನ
ತೋಯ್ದವಗೆ ತಾಪತ್ರಯ ಮಹದ್ದೋಷವೆಲ್ಲಹವು ೨೨

ದಿವಸ ಯಾಮ ಮುಹೂರ್ತಘಟಿಕಾ
ದ್ಯವಯವಗಳೊಳಗಿದ್ದು ಗಂಗಾ
ಪ್ರವಹದಂದದಿ ಕಾಲನಾಮಕ ಪ್ರವಹಿಸುತಲಿಪ್ಪ
ಇವನ ಗುಣರೂಪ ಕ್ರಿಯಂಗಳ
ನಿವಹದೊಳು ಮುಳುಗಾಡುತಲಿ ಭಾ
ರ್ಗವಿ ಸದಾನಂದಾತ್ಮಳಾಗಿಹಳೆಲ್ಲ ಕಾಲದಲಿ ೨೩

ವೇದತತಿಗಳಭಿಮಾನಿ ಲಕುಮಿಧ
ರಾಧರನ ಗುಣರೂಪ ಕ್ರಿಯೆಗಳ
ಆದಿಮಧ್ಯಾಂತವನು ಕಾಣದೆ ಮನದಿಯೋಚಿಸುತ
ಆದಪೆನೆ ಈತನಿಗೆ ಪತ್ನಿ ಕೃ
ಪೋದಧಿಯು ಸ್ವೀಕರಿಸಿದನು ಲೋ
ಕಾಧಿಪನು ಭಿಕ್ಷುಕನ ಮನೆ ಯೌತಣವ ಕೊಂಬಂತೆ ೨೪

ಕೋವಿದರು ಚಿತ್ರೈಸುವುದು ಶ್ರೀ
ದೇವಿಯೊಳಗಿಹ ನಿಖಿಳಗುಣ ತೃಣ
ಜೀವನದೆ ಕಲ್ಪಿಸಿ ಯುಕುತಿಯಲಿ ಮತ್ತು ಕ್ರಮದಿಂದ
ದೇವದೇವಕಿಯಿಪ್ಪಳೆಂದರಿ
ದಾವಿರಿಂಚನ ಜನನಿ ಈತನ
ನಾವಕಾಲದಲರಿಯಳಂತೆನೆ ನರರಪಾಡೇನು ೨೫

ಕ್ಷೀರದಧಿ ನವನೀತಘೃತದೊಳು
ಸೌರಭ ರಸಾಹ್ವಯನೆನಿಸಿ ಶಾಂ
ತೀರಮಣ ಜ್ಞಾನಕ್ರಿಯೇಚ್ಛಾಶಕ್ತಿಯೆಂದೆಂಬ
ಈರರಡು ನಾಮದಲಿ ಕರೆಸುವ
ಭಾರತೀ ವಾಗ್ದೇವಿ ವಾಯು ಸ
ರೋರುಹಾಸನರಲ್ಲಿ ನೆಲೆಸಿಹರೆಲ್ಲ ಕಾಲದಲಿ ೨೬

ವಸುಗಳೆಂಟು ನವಪ್ರಜೇಶರು
ಶ್ವಸನ ಗಣವೈವತ್ತು ಏಕಾ
ದಶ ದಿವಾಕರರನಿತು ರುದ್ರರು ಅಶ್ವಿನಿಗಳೆರಡು
ದಶವಿಹೀನ ಶತಾಖ್ಯ ಈ ಸುಮ
ನಸರೊಳಗೆ ಚತುರಾತ್ಮನಿಯ್ಯಾ
ಮಿಸುವ ಬ್ರಹ್ಮಸಮೀರ ಖಗಪ ಫಣೀಂದ್ರರೊಳಗಿಪ್ಪ ೨೭

ತೋರುತಿಪ್ಪನು ಚಕ್ರದಲಿ ಹಿಂ
ಕಾರ ನಾಮಕ ಶಂಖದಲಿ ಪ್ರತಿ
ಹಾರ ಗದೆಯಲಿ ನಿಧನ ಪದ್ಮದಲಿಪ್ಪ ಪ್ರಸ್ತಾಪ
ಕಾರುಣಿಕನುದ್ಗೀಥ ನಾಮದಿ
ಮಾರಮಣನೈರೂಪಗಳ ಶಂ
ಖಾರಿ ಮೊದಲಾದಾಯುಧಗಳೊಳು ಸ್ಮರಿಸಿ ಧರಿಸುತಿರು ೨೮

ತನುವೆರಥ ವಾಗಾಭಿಮಾನಿಯೆ
ಗುಣವೆನಿಸುವಳು ಶ್ರೋತ್ರದೊಳು ರೋ
ಹಿಣಿ ಶಶಾಂಕರು ಪಾಶಪಾಣಿಗಳಶ್ವವೆಂದೆನಿಸಿ
ಇನನು ಸಂಜ್ಞಾದೇವಿಯರು ಇಹ
ರನಳಲೋಚನ ಸೂತನೆನಿಸುವ
ಪ್ರಣವಪಾದ್ಯಪ್ರಾಣನಾಮಕ ರಥಿಕನೆನಿಸುವನು ೨೯

ಅಮಿತಮಹಿಮನಪಾರಗುಣಗಳ
ಸಮುತ ವರ್ಣಾತ್ಮಕ ಶ್ರುತಿಸ್ಮೃತಿ
ಗಮಿಸಲಾಪವೆ ತದಭಿಮಾನಿಗಳಂದೆನಿಸಿಕೊಂಬ
ಕಮಲಸಂಭವ ಭವಸುರೇಂದ್ರಾ
ದ್ಯಮರರನುದಿನ ತಿಳಿಯಲರಿಯರು
ಸ್ವಮಹಿಮೆಗಳಾದ್ಯಂತ ಮಧ್ಯಗಳರಿವ ಸರ್ವಜ್ಞ ೩೦

ವಿತ್ತದೇಹಾಗಾರ ದಾರಾ
ಪತ್ಯ ಮಿತ್ರಾದಿಗಳೊಳಗೆ ಹರಿ
ಪ್ರತ್ಯಗಾತ್ಮನು ಎಂದೆನಿಸಿ ನೆಲೆಸಿಪ್ಪನೆಂದರಿದು
ನಿತ್ಯದಲಿ ಸಂತೃಪ್ತಿ ಬಡಿಸುತ
ಉತ್ತಮಾಧಮ ಮಧ್ಯಮರ ಕೃತ
ಕೃತ್ಯನಾಗುನ್ಮತ್ತನಾಗದೆ ಭೃತ್ಯನಾನೆಂದು ೩೧

ದೇವದೇವೇಶನ ಸುಮೂರ್ತಿಕ
ಳೇವರಗಳೊಳಗನವರತ ಸಂ
ಭಾಸಿಸುತ ಪೂಜಿಸುತ ನೋಡುತ ಸುಖಿಸುತಿರು ಬಿಡದೆ
ಶ್ರೀವರ ಜಗನ್ನಾಥ ವಿಠಲನು
ತಾವೊಲಿದು ಕಾರುಣ್ಯದಲಿ ಭವ
ನೋವ ಪರಿಹರಿಸುವನು ಪ್ರಣತರ ಪತಿತಪಾವನನು ೩೨

ಅಂತು ಸಂಧಿ ೮ಕ್ಕೆ ಪದ್ಯಗಳು ೨೪೬ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು



## ಸಂಧಿ ೯ "ವರ್ಣಪ್ರಕ್ರಿಯ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಹರಿಯೆ ಪಂಚಾಶದ್ವರಣ ಸು
ಸ್ವರ ಉದಾತ್ತನುದಾತ್ತ ಪ್ರಚಯ
ಸ್ವರಿತ ಸಂಧಿ ವಿಸರ್ಗಬಿಂದುಗಳೊಳಗೆ ತದ್ವಾಚ್ಯ
ಇರುವ ತತ್ತನ್ನಾಮ ರೂಪಗ
ಳರಿತುಪಾಸನೆ ಗೈವರಿಳೆಯೊಳು
ಸುರತ ಸರಿ ನರರಲ್ಲವವರಾಡುವುದೆ ವೇದಾರ್ಥ ೧

ಈಶನಲಿ ವಿಜ್ಞಾನ ಭಗವ
ದ್ದಾಸರಲಿ ಸದ್ಭಕ್ತಿ ವಿಷಯ ನಿ
ರಾಸೆ ಮಿಥ್ಯಾವಾದಿಯಲಿ ಪ್ರದ್ವೇಷ ದಿನದಿನದಿ
ಈ ಸಮಸ್ತ ಪ್ರಾಣಿಗಳೊಳು ರ
ಮೇಶನಿಹನೆಂದರಿತು ಅವರಭಿ
ಲಾಷೆಗಳ ಪೂರೈಸುವುದೆ ಮಹಯಜ್ಞ ಹರಿಪೂಜೆ ೨

ತ್ರಿವಶ ಏಕಾತ್ಮಕನೆನಿಸಿ ಭೂ
ಉದಕ ಶಿಖಿಯೊಳಗ್ಯುತ್ತು ಕರಣದ
ಲಧಿಪತೆನಿಸುವ ಪ್ರಾಣ ಮುಖ್ಯಾದಿತ್ಯರೊಳು ನೆಲೆಸಿ
ವಿದಿತನಾಗಿದ್ದನವರತ ನಿರ
ವಧಿಕ ಸುಹಿಮನು ಸಕಲ ವಿಷಯವ
ನಿಧನ ನಾಮಕ ಸಂಕರುಷಣಾಹ್ವಯನು ಸ್ವೀಕರಿಪ ೩

ದಹಿಕದೈಶಿಕ ಕಾಲಿಕ ತ್ರಯ
ಗಹನ ಕರ್ಮಗಳುಂಟು ಇಹರೊಳು
ನಿಹಿತ ಕರ್ಮಗಳರಿತು ನಿಷ್ಕಾಮುಕನು ನೀನಾಗಿ
ಬೃಹತಿನಾಮಕ ಭಾರತೀಶನ
ಮಹಿತ ರೂಪವನೆನೆದು ಮನದಲಿ
ಅಹರಹರ್ ಭಗವಂತಗರ್ಪಿಸು ಪರಮಭಕುತಿಯಲಿ ೪

ಮೂರು ವಿಧ ಕರ್ಮಗಳೊಳಗೆ ಕಂ
ಸಾರಿ ಭಾರ್ಗವ ಹಯವದನ ಸಂ
ಪ್ರೇರಕನು ತಾನಾಗಿ ನವರೂಪಂಗಳನೆ ಧರಿಸಿ
ಸೂರಿಮಾನವ ಮಾನವರೊಳು ವಿ
ಕಾರ ಶೂನ್ಯನು ಮಾಡಿ ಮಾಡಿಸಿ
ಸಾರಭೋಕ್ತೃಸು ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ ೫

ಅನಳ ಪಕ್ವವಗೈಸಿದನ್ನವ
ನನಳನೊಳು ಹೋಮಿಸುವ ತೆರನಂ
ತನಿಮಿಷೇಶನು ಮಾಡಿ ಮಾಡಿಸಿದಖಿಳ ಕರ್ಮಗಳ
ಮನವಚನ ಕಾಯದಲಿ ತಿಳಿದನು
ದಿನದಿ ಕೊಡು ಶಂಕಿಸದೆ ವೃಜಿನಾ
ರ್ದನ ಸದಾ ಕೈಕೊಂಡು ಸಂತೈಸುವನು ತನ್ನವರ ೬

ಕುದುರೆ ಬಾಲದ ಕೊನೆಯ ಕೂದಲು
ತುದಿ ವಿಭಾಗವ ಮಾಡೆ ಶತವಿಧ
ವದರೊಳೊಂದನು ನೂರುಭಾಗವ ಮಾಡಲೆಂತಿಹುದೋ
ವಿಧಿ ಭವಾದಿ ಸಮಸ್ತ ದಿವಿಜರ
ಮೊದಲುಮಾಡಿ ತೃಣಾಂತ ಜೀವರೊ
ಳಧಿಕ ನ್ಯೂನತೆಯಿಲ್ಲವೆಂದಿಗು ಜೀವಪರಮಾಣು ೭

ಜೀವನಂಗುಷ್ಟಾಗ್ರ ಮೂರುತಿ
ಜೀವನಂಗುಟ ಮಾತ್ರ ಮೂರುತಿ
ಜೀವನ ಪ್ರಾದೇಶ ಜೀವಾಕಾರ ಮೂರ್ತಿಗಳು
ಏವಮಾದಿ ಅನಂತ ರೂಪದಿ
ಯಾವದವಯವಗಳೊಳು ವ್ಯಾಪಿಸಿ
ಕಾವ ಕರುಣಾಳುಗಳ ದೇವನು ಈ ಜಗತ್ರಯವ ೮

ಬಿಂಬ ಜೀವಾಂಗುಷ್ಟ ಮಾತ್ರದ
ಲಿಂಬುಗೊಂಡಿಹ ಸರ್ವರೊಳು ಸೂ
ಕ್ಷ್ಮಾಂಬರದಿ ಹೃತ್ಕಮಲ ಮಧ್ಯ ನಿವಾಸಿಯೆಂದೆನಿಸಿ
ಎಂಬರೀತಗೆ ಕೋವಿದರು ವಿ
ಶ್ವಂಭರಾತ್ಮ ಪ್ರಾಜ್ಞ ಭಕ್ತ ಕು
ಟುಂಬಿ ಸಂತೈಸುವನು ಈ ಪರಿ ಬಲ್ಲ ಭಜಕರನ ೯

ಪುರುಷನಾಮಕ ಸರ್ವಜೀವರೊ
ಳಿರುವ ದೇಹಾಕಾರ ರೂಪದಿ
ಕರಣನಿಯಾಮಕ ಹೃಷೀಕಪ ನಿಂದ್ರಿಯಂಗಳಲಿ
ತುರಿಯ ನಾಮಕ ವಿಶ್ವತಾ ಹ
ನ್ನೆರಡು ಬೆರಳುಳಿದುತ್ತಮಾಂಗದ
ಲೆರಡಧಿಕ ಎಪ್ಪತ್ತುಸಾವಿರ ನಾಡಿಯೊಳಗಿಪ್ಪ ೧೦

ವ್ಯಾಪಕನು ತಾನಾಗಿ ಜೀವ ಸ್ವ
ರೂಪದೇಹದ ಒಳಹೊರಗೆ ನಿ
ರ್ಲೇಪನಾಗಿಹ ಜೀವ ಕೃತ ಕರ್ಮಗಳನಾಚರಿಸಿ
ಶ್ರೀ ಪಯೋಜ ಭವೇರರಿಂದ ಪ್ರ
ದೀಪ ವರ್ಣ ಸ್ವಮೂರ್ತಿ ಮಧ್ಯಗ
ತಾಪೊಳೆವ ವಿಶ್ವಾದಿರೂಪದಿ ಸೇವೆ ಕೈಕೊಳುತ ೧೧

ಗರುಡ ಶೇಷ ಭವಾದಿ ನಾಮವ
ಧರಿಸಿ ಪವನ ಸ್ವರೂಪ ದೇಹದಿ
ಕರಣ ನಿಯ್ಯಾಮಕನು ತಾನಾಗಿಪ್ಪ ಹರಿಯಂತೆ
ಸರಸಿಜಾಸನ ವಾಣಿ ಭಾರತಿ
ಭರತನಿಂದೊಡಗೂಡಿ ಲಿಂಗದ
ಲಿರುತಿಹರು ಮಿಕ್ಕಾದಿತೇಯರಿಗಿಲ್ಲವಾಸ್ಥಾನ ೧೨

ಜೀವನಕೆ ತುಷದಂತೆ ಲಿಂಗವು
ಸಾವಕಾಶದಿ ಪೊಂದಿಪುತ್ತಲು
ಪ್ರಾವರಣ ರೂಪದಲಿ ಇಪ್ಪುದು ಭಗವದಿಚ್ಛೆಯಲಿ
ಕೇವಲ ಜಡ ಪ್ರಕೃತಿ ಇದಕದ
ದೇವತೆಯು ಮಹಲಕುಮಿಯೆನಿಪಳು
ಆ ವಿರಜೆಯಸ್ನಾನ ಪರಿಯಂತರದಿ ಹತ್ತಿಹುದು ೧೩

ಆರದಿಕ ದಶ ಕಳೆಗಳುಳ್ಳ ಶ
ರೀರವನಿರುದ್ಧಗಳ ವಾಧ್ಯದಿ
ಸೇರಿಯಿಪ್ಪವು ಜೀವ ಪರಮಾಚ್ಛಾದಿಕದ್ವಯವು
ಬಾರದಂದದಿ ದಾನವರನತಿ
ದೂರಗೈಸುತ ಶ್ರೀ ಜನಾರ್ದನ
ಮೂರು ಗುಣದೊಳಗಿಪ್ಪನೆಂದಿಗು ತ್ರಿವೃತು ಎಂದೆನಿಸಿ ೧೪

ರುದ್ರ ಮೊದಲಾದಮರರಿಗೆ ಅನಿ
ರುದ್ಧ ದೇಹವೆ ಮನೆಯೆನಿಸುವುದು
ಇದ್ದು ಕೆಲಸವ ಮಾಡರಲ್ಲಂದಿತ್ತ ಸ್ಥೂಲವಲಿ
ಕೃದ್ಧ ಖಳದಿವಿಜರು ಪರಸ್ಪರ
ಸ್ಪರ್ಧೆಯಿಂದಲಿ ದ್ವಂದ್ವ ಕರ್ಮಸ
ಮೃದ್ಧಿಗಳನಾಚರಿಸುವರು ಪ್ರಾಣೇಶನಾಜ್ಞೆಯಲಿ ೧೫

ಮಹಿಯೊಳಗೆ ಸುಕ್ಷೇತ್ರ ತೀರ್ಥದಿ
ತುಹಿನ ವರುಷ ವಸಂತಕಾಲದಿ
ದಹಿಕ ದೈಶಿಕ ಕಾಲಿಕತ್ರಯ ಧರ್ಮ ಕರ್ಮಗಳ
ದ್ರುಹಿಣ ಮೊದಲಾದಮರರೆಲ್ಲರು
ವಹಿಸಿ ಗುಣಗಳನನುಸರಿಸಿ ಸ
ನ್ನಿಹಿತರಾಗಿದ್ದೆಲ್ಲರೊಳು ಮಾಡುವರು ವ್ಯಾಪಾರ ೧೬

ಕೇಶಸಾಸಿರ ವಿಧ ವಿಭಾಗವ
ಗೈಸಲೆನಿತನಿತಿಹ ಸುಷುಮ್ನವು
ಆಶಿರಾಂತದಿ ವ್ಯಾಪಿಸಿಹುದೀ ದೇಹ ಮಧ್ಯದಲಿ
ಆ ಸುಷುಮ್ನಕ ವಜ್ರ ಕಾರ್ಯ ಪ್ರ
ಕಾಶಿನೀ ವೈದ್ಯುತಿಗಳಿಹವು ಪ್ರ
ದೇಶದಲಿ ಪಶ್ಚಿಮಕೆ ಉತ್ತರ ಪೂರ್ವ ದಕ್ಷಿಣಕೆ ೧೭

ಆ ನಳಿನಭವ ನಾಡಿಯೊಳಗೆ ತ್ರಿ
ಕೋಣ ಚಕ್ರವು ಇಪ್ಪುದಲ್ಲಿ ಕೃ
ಶಾನುಮಂಡಲ ಮಧ್ಯಗನು ಸಂಕರುಷಣಾಹ್ವಯನು
ಹೀನ ಪಾಪಾತ್ಮಕ ಪುರೂಷನ
ಹಾನಿಗೈಸುತ ದಿನದಿನದಿ ವಿ
ಜ್ಞಾನಮಯ ಶ್ರೀ ವಾಸುದೇವನ ಐದಿಸುವ ಕರುಣಿ ೧೮

ಮಧ್ಯ ನಾಡಿಯ ಮಧ್ಯದಲಿ ಹೃ
ತ್ಪದ್ಮ ಮೂಲದಿ ಮೂಲಪತಿಪದ
ಪದ್ಮ ಮೂಲದಲಿಪ್ಪ ಪವನನ ಪಾದ ಮೂಲದಲಿ
ಹೊದ್ದಿಕೊಂಡಿಹ ಜೀವಲಿಂಗನಿ
ರುದ್ಧ ದೇಹ ವಿಶಿಷ್ಟನಾಗಿ ಕ
ಪರ್ದಿ ಮೊದಲಾದಮರರೆಲ್ಲರು ಕಾದುಕೊಂಡಿಹರು ೧೯

ನಾಳ ಮಧ್ಯದೊಳಿಪ್ಪ ಹೃತ್ಕ್ರೀ
ಲಾಲಜದೊಳಿಪ್ಪಷ್ಟದಳದಿ ಕು
ಲಾಲ ಚಕ್ರದ ತೆರದಿ ಚರಿಸುತ ಹಂಸನಾಮಕನು
ಕಾಲ ಕಾಲಗಳಲ್ಲಿ ಎಣ್ಣಿಸಿ
ಪಾಲಕರ ಕೈಸೇವೆ ಕೊಳುತ ಕೃ
ಪಾಳು ಅವರಭಿಲಾಷೆಗಳ ಪೂರೈಸಿಕೊಡುತಿಪ್ಪ ೨೦

ವಾಸವಾನುಜ ರೇಣುಕಾತ್ಮಜ
ದಾಶರಥಿ ವೃಜಿನಾರ್ದನಮಲ ಒ
ಲಾಶಯಾಲಯ ಹಯವದನ ಶ್ರೀ ಕಪಿಲ ನರಸಿಂಹ
ಈ ಸುರೂಪದಲವರವರ ಸಂ
ತೋಷಪಡಿಸುತ ನಿತ್ಯ ಸುಖಮಯ
ವಾಸವಾಗಿಹ ಹೃತ್ಕಮಲದೊಳು ಬಿಂಬನೆಂದೆನಿಸಿ ೨೧

ಸುರಪನಾಲಯ ವೈದಿದರ ಮನ
ವೆರಗುವುದು ಸತ್ಪುಣ್ಯ ಮಾರ್ಗದಿ
ಬರಲು ವಹ್ನಿಯ ಮನೆಗೆ ನಿದ್ರಾಲಸ್ಯ ಹಸಿತೃಷೆಯು
ತರಣಿ ತನಯ ನಿಕೇತನದಿ ಸಂ
ಭರಿತ ಕೋಪಾಟೋಪ ತೋರುವ
ದರವಿದೂರನು ನಿರೃತಿಯಲಿರ ಪಾಪಗಳ ಮಾಳ್ಪ ೨೨

ವರುಣನಲ್ಲಿ ವಿನೋದ ಹಾಸ್ಯವು
ಮರುತನೊಳು ಗಮನಾಗಮನ ಹಿಮ
ಕರ ಧನಾಧಿಪರಲ್ಲಿ ಧರ್ಮದ ಬುದ್ಧಿ ಜನಿಸುವುದು
ಹರನ ಮಂದಿರದಲ್ಲಿ ಗೋಧನ
ಧರಣಿ ಕನ್ಯಾದಾನಗಳು ಒಂ
ದರಘಳಿಗೆ ತಡೆಯದಲೆ ಕೊಡುತಿಹ ಚಿತ್ತ ಪುಟ್ಟುವುದು ೨೩

ಹೃದಯದೊಳಗೆ ವಿರಕ್ತಿ ಕೇಸರ
ಕೂದಗೆ ಸ್ವಪ್ನ ಸುಷುಪ್ತಿ ಲಿಂಗದಿ
ಮಧುಹ ಕರ್ಣಿಕೆಯಲ್ಲಿ ಬರ ಜಾಗ್ರತೆಯು ಪುಟ್ಟುವುದು
ಸುದರುಶನ ಮುಂತಾದ ಅಷ್ಟಾ
ಯುಧವ ಪಿಡಿದಾಶಾಧಿ ಪತಿಗಳ
ನದನದಲಿ ಸಂಚರಿಸುತೀಪರಿ ಬುದ್ಧಿಗಳ ಕೊಡುವ ೨೪

ಸೂತ್ರನಾಮಕ ಪ್ರಾಣಪತಿ ಗಾ
ಯತ್ರಿ ಸಂಪ್ರತಿ ಪದ್ಯನಾಗೀ
ಗಾತ್ರದೊಳು ನೆಲೆಸಿರಲು ತಿಳಿಯದೆ ಕಂಡಕಂಡಲ್ಲಿ
ಧಾತ್ರಿಯೊಳು ಸಂಚರಿಸಿ ಪುತ್ರಕ
ಳತ್ರಸಹಿತನುದಿನದಿ ತೀರ್ಥ
ಕ್ಷೇತ್ರಯಾತ್ರೆಯ ಮಾಡಿದವು ಎಂದೆನುತ ಹಿಗ್ಗುವರು ೨೫

ನಾರಸಿಂಹಸ್ವರೂಪದೊಳಗೆ ಶ
ರೀರನಾಮದಿ ಕರೆಸುವನು ಹದಿ
ನಾರು ಕಳಗಳನುಳ್ಳ ಲಿಂಗದಿ ಪುರುಷನಾಮಕನು
ತೋರುವನು ಅನಿರುದ್ಧದೊಳು ಶಾಂ
ತೀರಮಣನನಿರುದ್ಧ ರೂಪದಿ
ಪ್ರೇರಿಸುವ ಪ್ರದ್ಯುಮ್ನ ಸ್ಥೂಲಕಳೇವರದೊಳಿದ್ದು ೨೬

ಮೊದಲುತ್ವಕ್ಚರ್ಮಗಳು ಮಾಂಸವು
ರುಧಿರ ಮೇದೋಮಜ್ಜವಸ್ತಿಗ
ಳಿದರೊಳಗೆ ಏಕೋನಪಂಚಾಶನ್ಮರುದ್ಗಣವು
ನಿಧನಹಿಂಕಾರಾದಿ ಸಾಮಗ
ನದರ ನಾಮದಿ ಕರೆಸು ತೊಂಭ
ತ್ತಧಿಕ ನಾಲ್ವತ್ತೆನಿಪ ರೂಪದಿ ಧಾತುಗಳೊಳಿಪ್ಪ ೨೭

ಸಪ್ತಧಾತುಗಳೊಳಹೊರಗೆ ಸಂ
ತಪ್ತಲೋಹಗತಾಗ್ನಿಯಂದದಿ
ಸಪ್ತ ಸಾಮಗನಿಪ್ಪನನ್ನಮಯಾದಿಕೋಶದೊಳು
ಲಿಪ್ತನಾಗದ ತತ್ತದಾಹ್ವಯ
ಕ್ಲೃಪ್ತ ಭೋಗವಕೊಡುತ ಸ್ವಪ್ನಸು
ಷುಪ್ತಿ ಜಾಗ್ರತೆಯಿಾವ ತ್ಯೆಜಸ ಪ್ರಾಜ್ಞವಿಶ್ವಾಖ್ಯ ೨೮

ತೀನಿಕೊಂಡಿಹವಲ್ಲ ಮಜ್ಜಾಕ
ಳೀವರದ ಲಂಗುಲಿಯ ಪರ್ವದ
ರಾನಿನಲಿ ಮೂನ್ನೂರು ಅರವತ್ತೆನಿಪ ತ್ರಿಸ್ಥಳದಿ
ಸಾವಿರದಯೆಂಭತ್ತು ರೂಪವ
ಕೋವಿದರು ಪೇಳುವರು ದೇಹದಿ
ದೇವತೆಗಳೊಡಗೂಡಿ ಕ್ರೀಡಿಸುವನು ರಮಾರಮಣ ೨೯

ಕೀಟಪೇಶಸ್ಕಾರ ನೆನವಿಲಿ
ಕೀಟ ಭಾವವ ತೂರೆದು ತದ್ವ
ತ್ಕೀಟ ರೂಪವನ್ಯೆದಿ ಆಡುವ ತೆರದಿ ಭಕುತಿಯಲಿ
ಕೃಟಭಾರಿಯು ಧ್ಯಾನದಿಂದ ಭ
ವಾಟವಿಯು ನಿಶಿಶೀಘ್ರದಿಂದಲಿ
ದಾಟಿ ಸಾರೂಪ್ಯವನು ಐದುವರಲ್ಪಜೀವಿಗಳು ೩೦

ಈ ಪರಿಯ ದೇಹದೊಳು ಭಗವ
ದ್ರೂಪಗಳ ಮರೆಯದಲೆ ಮನದಿ ಪ
ದೇಪದೇ ಭಕುತಿಯಲಿ ಸ್ಮರಿಸುತಲಿಪ್ಪ ಭಕುತರನ
ಗೋಪತಿ ಜಗನ್ನಾಥ ವಿಠಲ ಸ
ಮಿಾಪಗನು ತಾನಾಗಿ ಸಂತತ
ಸಾಪರೋಕ್ಷಿಯ ಮಾಡಿ ಪೊರೆವನು ಎಲ್ಲ ಕಾಲದಲಿ ೩೧

ಅಂತು ಸಂಧಿ ೯ಕ್ಕೆ ಪದ್ಯಗಳು ೨೭೭ಕ್ಕೆ ಮಂಗಳಂ

*

## ಸಂಧಿ ೧೦ "ಸರ್ವ ಪ್ರತೀಕ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಆವ ಪರಬೊಮ್ಮನತಿ ವಿಮಲಾಂ
ಗಾವ ಬದ್ಧರು ಎಂದೆನಿಸ ರಾ
ಜೀವಭವ ಮೊದಲಾದಮರರನುದಿನದಿ ಹರಿಪದವ
ಸೇವಿಪರಿಗನುಕೂಲರಲ್ಲವೆ
ತಾವು ಇವರನು ಕೆಡಿಸಬಲ್ಲರೆ
ಶ್ರೀ ವಿಲಾಸಾಸ್ಪದನ ದಾಸರಿಗುಂಟೆ ಅಪಜಯವು ೧

ಶ್ರೀದನಂಘ್ರಿ ಸರೋಜಯುಗಳೇ
ಕಾದಶಸ್ಥಾನಾತ್ಮದೊಳಗಿ
ಟ್ಟಾದರದಿ ಸಂತುತಿಸುವವರಿಗೆ ಈ ನವಗ್ರಹವು
ಆದಿತೇಯರು ಸಂತತಾಧಿ
ವ್ಯಾಧಿಗಳ ಪರಿಹರಿಸುತವರನು
ಕಾದುಕೊಂಡಿಹರೆಲ್ಲ ರೊಂದಾಗೀಶನಾಜ್ಞೆಯಲಿ ೨

ಮೇದಿನಿಯ ಮೇಲುಳ್ಳ ಗೋಷ್ಪಾ
ದೋದಕಗಳೆಲ್ಲಮಲ ತೀರ್ಥವು
ಪಾದಪಾದ್ರಿ ಧರಾತಳವೆ ಸುಕ್ಷೇತ್ರ ಜೀವಗಣ
ಶ್ರೀಧನ ಪ್ರತಿಮೆಗಳು ಅವರುಂ
ಬೋದನವೆ ನೈವೇದ್ಯ ನಿತ್ಯದಿ
ಹಾದಿ ನಡೆವುದೆ ನರ್ತನಗಳೆಂದರಿತವನೆ ಯೋಗಿ ೩

ಸರ್ವದೇಶವು ಪುಣ್ಯದೇಶವು
ಸರ್ವಕಾಲವು ಪರ್ವಕಾಲವು
ಸರ್ವಜೀವರು ದಾನಪಾತ್ರರು ಮೂರು ಲೋಕದಲಿ
ಸರ್ವ ಮಾತುಗಳಲ್ಲ ಮಂತ್ರವು
ಸರ್ವ ಕೆಲಸಗಳೆಲ್ಲ ಪೂಜೆಯು
ಶರ್ವವಂದ್ಯನ ವಿಮಲಮೂರ್ತಿ ಧ್ಯಾನವುಳ್ಳವಗೆ ೪

ದೇವ ಖಾತ ತಟಾಕ ವಾಪಿ ಸ
ರೋವರಗಳಭಿಮಾನಿ ಸುರರು ಕ
ಳೇವರದೊಳಿಹ ರೋಮ ಕೂಪಗಳೊಳಗೆ ತುಂಬಿಹರು
ಆ ವಿಯದ್ಗಂಗಾದಿ ನದಿಗಳು
ಭಾವಿಸುವದೆಪ್ಪತ್ತೆರಡೆನಿಪ
ಸಾವಿರ ಸುನಾಡಿಗಳೊಳಗೆ ಪ್ರವಹಿಸುತಲಿಹವೆಂದು ೫

ಮೂರುಕೋಟಿಯು ಮೇಲೆ ಶೋಭಿಪ
ಈರಧಿಕ ಎಪ್ಪತ್ತು ಸಾವಿರ
ಮಾರುತಾಂತರ್ಯಾಮಿ ಮಾಧವ ಪ್ರತಿ ದಿವಸದಲ್ಲಿ
ತಾ ರಮಿಸುತಿಹನೆಂದು ತಿಳಿದಿಹ
ಸೂರಿಗಳ ದೇವತೆಗಳವರ ಶ
ರೀರಗಳೆ ಸುಕ್ಷೇತ್ರವವರರ್ಚನೆಯೆ ಹರಿಪೂಜೆ ೬

ಶ್ರೀವರನಿಗಭಿಷೇಕವೆಂದರಿ
ದೀ ವಸುಂಧರೆಯೊಳಗೆ ಬಲ್ಲವ
ರಾವ ಜಲದಲಿ ಮಿಂದರೆಯು ಸರಿ ಗಂಗಾದಿ ತೀರ್ಥಗಳು
ತಾ ವೊಲಿದು ಬಂದಲ್ಲೆ ನೆಲೆಗೊಂ
ಡೀವ ವಖಿಳಾರ್ಥಗಳ ನರಿಯದ
ಜೀವರಮರ ತರಂಗಿಣಿಯ ನೈದಿದರೆ ಫಲವೇನು ? ೭

ನದನದಿಗಳಿಳೆಯೊಳಗೆ ಹರಿವವು
ಉದಧಿ ಪರಿಯಂತರದಿ ತರುವಾ
ಯದಲಿ ರಮಿಸುವುವಲ್ಲಿ ತನ್ಮಯವಾಗಿ ತೋರದಲೆ
ವಿಧಿ ನಿಷೇಧಗಳಾಚರಿಸುವರು
ಬುಧರು ಭಗವದ್ರೂಪ ಸರ್ವ
ತ್ರದಲಿ ಚಿಂತನೆ ಬರಲು ತ್ಯಜಿಸುವರಖಿಳ ಕರ್ಮಗಳ ೮

ಕಲಿಯೆ ಮೊದಲಾದಖಿಳ ದಾನವ
ರೊಳಗೆ ಬ್ರಹ್ಮಭವಾದಿ ದೇವ
ರ್ಕಳು ನಿಯಾಮಕರಾಗಿ ಹರಿಯಾಜ್ಞೆಯಲಿ ಅವರವರ
ಕಲುಷ ಕರ್ಮವ ಮಾಡಿ ಮಾಡಿಸಿ
ಜಲರುಹೇಕ್ಷಣ ಗರ್ಪಿಸುತ ನಿ
ಶ್ಚಲ ಸುಭಕ್ತಿಜ್ಞಾನ ಪೂರ್ಣರು ಸುಖಿಪರವರೊಳಗೆ ೯

ಆವ ಜೀವರೊಳಿದ್ದರೇನಿ
ನ್ನಾವ ಕರ್ಮವ ಮಾಡಲೇನಿ
ನ್ನಾವ ಗುಣರೂಪಗಳುಪಾಸನೆ ಮಾಡಲೇನವರು
ಕಾವನಯ್ಯನ ಪರಮ ಸತ್ಕರು
ಣಾವಲೋಕನ ಬಲದಿ ಚರಿಸುವ
ದೇವತೆಗಳನು ಮುಟ್ಟಲಾಪವೆ ಪಾಪ ಕರ್ಮಗಳು ೧೦

ಪತಿಯೊಡನೆ ಮನಬಂದ ತೆರದಲಿ
ಪ್ರತಿದಿವಸದಲಿ ರಮಿಸಿ ಮೋದಿಸಿ
ಸುತರ ಪಡೆದಿಳೆಯೊಳು ಜಿತೇಂದ್ರಿಯಳೆಂದು ಕರೆಸುವಳು
ಕೃತಿಪತಿ ಕಥಾಮೃತ ಸುಭೋಜನ
ರತ ಮಹಾತ್ಮರಿಗಿತರ ದೋಷ
ಪ್ರತತಿಗಳು ಸಂಬಂಧಿಸುವುವೇಽಚ್ಯುತನ ದಾಸರಿಗೆ ೧೧

ಸೂಸಿ ಬಹನದಿಯೊಳಗೆ ತನ್ನ ಸ
ಹಾಸ ತೋರುವೆನೆಂದು ಜಲಕಿದಿ
ರೀಸಿದರೆ ಕೈಸೋತು ಮುಳುಗುವ ಹರಿಯ ಬಿಟ್ಟವನು
ಕ್ಲೇಶವೈದುವ ನಾದಿಯಲಿ ಸ
ರ್ವೇಶ ಕ್ಲುಪ್ತಿಯ ಮಾಡಿದುದ ಬಿ
ಟ್ಟಾಸೆಯಿಂದಲಿ ಅನ್ಯರಾರಾಧಿಸುವ ಮಾನವನು　　೧೨

ನಾನು ನನ್ನದು ಎಂಬ ಜಡಮತಿ
ಮಾನವನು ದಿನದಿನದಿ ಮಾಡುವ
ಸ್ನಾನಜಪ ದೇವಾರ್ಚನೆಯ ಮೊದಲಾದ ಕರ್ಮಗಳ
ದಾನವರು ಸಳದೊಯ್ವರಲ್ಲದೆ
ಶ್ರೀನಿವಾಸನು ಸ್ವೀಕರಿಸ ಮು
ಪ್ಪಾನೆ ಪಕ್ವ ಕಪಿತ್ಥಫಲ ಭಕ್ಷಿಸಿದವೋಲಹುದು　　೧೩

ಧಾತ್ರಿಯೊಳಗುಳ್ಳಖಿಳ ತೀರ್ಥ
ಕ್ಷೇತ್ರ ಚರಿಸಿದರೇನು ಪಾತ್ರಾ
ಪಾತ್ರವರಿತನ್ನಾದಿ ದಾನವ ಮಾಡಿಫಲವೇನು
ಗಾತ್ರ ನಿರ್ಮಲನಾಗಿ ಮಂತ್ರ
ಸ್ತೋತ್ರ ಪಠಿಸಿದರೇನು ಹರಿಸ
ರ್ವತ್ರಗತನೆಂದರಿಯದಲೆ ತಾಕರ್ತೃಯೆಂಬುವನು　　೧೪

ಕಂಡ ನೀರೊಳು ಮುಳುಗಿ ದೇಹವ
ದಂಡಿಸಿದಫಲವೇನು ದಂಡ ಕ
ಮಂಡಲೂಗಳನೆ ಧರಿಸಿ ಯತಿಯೆಂದೆನಿಸಿ ಫಲವೇನು
ಅಂಡಜಾಧಿಪನಂಸಗನ ಪದ
ಪುಂಡರೀಕದಿ ಮನವಹರ್ಷಿಸಿ
ಬಂಡುಣಿಯವೋಲಿರಿಸಿ ಸುಖಬಡದಿಪ್ಪ ಮಾನವನು　　೧೫

ವೇದಶಾಸ್ತ್ರ ಪುರಾಣ ಕಥೆಗಳ
ನೋದಿ ಪೇಳಿದರೇನು ಸಕಲ ನಿ
ಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು
ಒದಸಂಗಳ ಜರಿದು ಶ್ವಾಸ ನಿ
ರೋಧ ಗೈಸಿದರೇನು ಕಾಮ
ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು ೧೬

ಏನು ಕೇಳಿದರೇನು ನೋಡಿದ
ರೇನು ಓದಿದರೇನು ಪೇಳಿದ
ರೇನು ಪಾಡಿದರೇನು ಮಾಡಿದರೇನು ದಿನದಿನದಿ
ಶ್ರೀನಿವಾಸನ ಜನ್ಮಕರ್ಮ ಸ
ಮಾನುದಾಗದಿ ನನೆದು ತತ್ತ್ವ
ಸ್ಥಾನದಲಿ ತದ್ರೂಪತನ್ನಾಮಕನ ಸ್ಮರಿಸದವ ೧೭

ಬುದ್ಧಿ ವಿದ್ಯಾಬಲದಿ ಪೇಳಿದ
ಶುದ್ಧ ಕಾವ್ಯಸಿದಲ್ಲಿ ತತ್ವ ಸು
ಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ
ಮಧ್ವವಲ್ಲಭ ತಾನೆ ಹೃದಯದೊ
ಳಿದ್ದು ನುಡಿದಂದದಲಿ ನುಡಿದೆ ನ
ಬದ್ಧಗಳ ನೋಡದಲೆ ಕಿವಿಗೊಟ್ಟಾಲಿಪುದು ಬುಧರು ೧೮

ಕಬ್ಬಿನೊಳಗಿಹ ರಸವಿದಂತ ನಿ
ಗ್ಗಬ್ಬ ಬಲ್ಲದೆ ಭಾಗ್ಯಯೌವನ
ಮಬ್ಬಿನಲಿ ಮೈಮರೆದವಗೆ ಹರಿಸುಚರಿತಾಮೃತವು
ಲಭ್ಯವಾಗದು ಹರಿಪದಾಬ್ಜದಿ
ಹಬ್ಬಿದತಿ ಸದ್ಭಕ್ತಿರಸವುಂ
ಡುಬ್ಬಿ ಕೊಬ್ಬಿ ಸುಖಾಬ್ಧಿಯೊಳಗಾಡುವವಗಲ್ಲದಲ ೧೯

ಖಗವರ ಧ್ವಜನಂಘ್ರಿ ಭಕುತಿಯು
ಬಗೆಮನರಿಯದ ಮಾನವರಿಗಿದು
ಒಗಟಿನಂದದಿ ತೋರುತಿಪ್ಪುದು ಎಲ್ಲಕಾಲದಲಿ
ತ್ರಿಗುಣವರ್ಜಿತನಮಲ ಗುಣಗಳ
ಪೊಗಳಿ ಹಿಗ್ಗುವ ಭಾಗವತರಿಗ
ಮಿಗೆಭಕುತಿವಿಜ್ಞಾನ ಸ ಪವಿತ್ತು ನರ ರಕ್ಷಿಪುದು ೨೦

ಪರಮತತ್ವ ರಹಸ್ಯವಿದು ಭೂ
ಸುರರು ಕೇಳ್ವುದು ಸಾದರದಿ ನಿ
ಷ್ಠುರಗಳಿಗೆ ಮೂಢರಿಗೆ ಪಂಡಿತಮಾನಿ ಪಿಶುಣರಿಗೆ
ಅರಸಿಕರಿಗಿದು ಪೇಳ್ವುದಲ್ಲಸ
ಪರತ ಭಗವತ್ಪಾದಯುಗ್ಮಾಂ
ಬರುಹ ಮಧುಕರರೆನಿಸುವರಿಗರುಪುವುದು ಮೋದದಲಿ ೨೧

ಲೋಕವಾರ್ತೆಯಿದಲ್ಲ ಪರಲೋ
ಕೈಕಸಾಧನ ವಾರ್ತೆ ಕೇಳ್ವುದ
ಕಾಕುವ ಮನುಜರಿಗಿದು ಸಮರ್ಪಕವಾಗಿ ತೋರಯಿಸದು
ಕೋಕನದ ಪರಿಮಳವು ಷಟ್ಪದ
ಸ್ವೀಕರಿಸುವಂದದಲಿ ಜಲಚರ
ಭೇಕಬಲ್ಲುದೆ ಇದರ ರಸ ಹರಿಭಕುತಗಲ್ಲದಲೆ ೨೨

ಸ್ವಪ್ರಯೋಜನರಹಿತ ಸಕಲೇ
ಷ್ಟ ಪ್ರದಾಯಕ ಸರ್ವಗುಣ ಪೂ
ರ್ಣ ಪ್ರಮೇಯ ಜರಾಮರಣವರ್ಜಿತ ವಿಗತಕ್ಲೇಶ
ವಿಪ್ರತಮ ವಿಶ್ವಾಖ್ಯಘೃಣಿ ಸೂ
ರ್ಯ ಪ್ರಕಾಶಾನಂತ ಮಹಿಮ ಘೃ
ತ ಪ್ರತೀಕಾರಾಧಿತಾಂಘ್ರಿಸರೋಜ ಸುರರಾಜ ೨೩

ವನಚರಾದ್ರಿ ಧರಾಧರನೆ ಜಯ
ಮನುಜಮೃಗವರವೇಷ ಜಯ ವಾ
ಮನ ತ್ರಿವಿಕ್ರಮ ದೇವ ಜಯಭೃಗುರಾಮ ಭೂಮಿಜಯ
ಜನಕಜಾವಲ್ಲಭನೆ ಜಯ ರು
ಗ್ಮಿಣಿ ಮನೋರಥ ಸಿದ್ಧಿದಾಯಕ
ಜನವಿಮೋಹಕ ಕಲಿವಿದಾರಣ ಜಯ ಜಯಾರಮಣ ೨೪

ಸಚ್ಚಿದಾನಂದಾತ್ಮ ಬ್ರಹ್ಮಕ
ರಾರ್ಚಿತಾಂಘ್ರಿಸರೋಜ ಸುಮನಸ
ಪ್ರೋಚ್ಯ ಸನ್ಮಂಗಳದ ಮಧ್ವಾಂತಃಕರಣ ರೂಢ
ಅಚ್ಯುತ ಜಗನ್ನಾಥ ವಿಠ್ಠಲ
ನಿಚ್ಚ ಮೆಚ್ಚಿದ ಜನರ ಬಿಡ ಕಾ
ಡ್ಗಿಚ್ಚನುಂಡಾರಣ್ಯದೊಳು ಗೋಗೋಪರನು ಕಾಯ್ದ ೨೫

ಅಂತು ಸಂಧಿ ೧೦ಕ್ಕೆ ಪದ್ಯಗಳು ೩೦೨ಕ್ಕೆ ಮಂಗಳಂ



# ಸಂಧಿ ೧೧. "ಧ್ಯಾನಪ್ರಕ್ರಿಯ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಪಾದುಕೆಯು ಕಂಟಕ ಸಿಕತ ವೊದ
ಲಾದವನುದಿನ ಬಾಧಿಸವು ಏ
ಕಾದಶೇಂದ್ರಿಯಗಳಲಿ ಬಿಡದೆ ಹೃಷೀಕಪನ ಮೂರ್ತಿ
ಸಾದರದಿ ನೆನೆವವನು ಏನಪ
ರಾಧಗಳ ಮಾಡಿದರು ಸರಿಯೆ ನಿ
ರೋಧಗೈಸವು ಮೋಕ್ಷಮಾರ್ಗಕೆ ದುರಿತರಾಶಿಗಳು ೧

ಹಗಲನಂದಾದೀಪದಂದದಿ
ನಿಗಮವೇದ್ಯನ ಪೂಜಿಸುತ ಕೈ
ಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೆ
ಜಗದುದರ ಕೊಟ್ಟುದನು ಭುಂಜಿಸು
ಮಗ ಮಡದಿ ಪ್ರಾಣೇಂದ್ರಿಯಾತ್ಮಾ
ದಿಗಳು ಭಗವದಧೀನವೆಂದಡಿಗಡಿಗೆ ನೆನೆವುತಿರು ೨

ಅಸ್ವತಂತ್ರನು ಜೀವ ಹರಿ ಸ
ರ್ವಸ್ವತಂತ್ರನು ನಿತ್ಯಸುಖಮಯ
ನಿಸ್ವಬದ್ಧಲ್ಪಜ್ಞ ಶಕ್ತಸದುಃಖಿ ನಿರ್ವಿಣ್ಣ
ಹ್ರಸ್ವದೇಹಿ ಸನಾಥ ಜೀವನು
ವಿಶ್ವವ್ಯಾಪಕ ಕರ್ತೃಬ್ರಹ್ಮ ಸ
ರಸ್ವತೀಶಾದ್ಯಮರನುತ ಹರಿಯೆಂದು ಕೊಂಡಾಡು ೩

ಮತ್ತೆ ವಿಶ್ವಾದ್ಯೆಂಟುರೂಪೊಂ
ಭತ್ತರಿಂದಲಿ ವೆಚ್ಚಿಸಲು ಎ
ಪ್ಪತ್ತೆರಡು ರೂಪಗಳಹವು ಒಂದೊಂದೆ ಸಾಹಸ್ರ
ಸ ರ್ಥಸ್ರಥಕುನಾಡಿಗಳೊಳಗೆ ಸ
ರ್ವೋತ್ತಮನ ತಿಳಿಯೆಂದು ಭೀಷ್ಮನು
ಬಿತ್ತರಿಸಿದನು ಧರ್ಮತನಯಗೆ ಶಾಂತಿಪರ್ವದಲಿ ೪

ಎಂಟು ಪ್ರಕೃತಿಗಳೊಳಗೆ ವಿಶ್ವಾ
ದ್ಯೆಂಟು ರೂಪದಲಿದ್ದು ಭಕುತರ
ಕಂಟಕವ ಪರಿಹರಿಸುತಲಿ ಪಾಲಿಸುವ ಪ್ರತಿದಿನದಿ
ನೆಂಟನಂದದಲಡೆಬಿಡದೆ ವೈ
ಕುಂಠ ರಮಣನು ತನ್ನವರ ನಿ
ಷ್ಕಂಟಕ ಸುಮಾರ್ಗದಲಿ ನಡೆಸುವ ದುರ್ಜನರ ಬಿಡುವ ೫

ಸ್ವರಮಣನು ಶಕ್ತ್ಯಾದಿರೂಪದಿ
ಕರಣಮಾನಿಗಳೊಳಗೆ ನೆಲೆಸಿ
ದ್ದ ರವಿದೂರನು ಸ್ಥೂಲವಿಷಯಗಳುಂಡುಣಿಸ ನಿತ್ಯ
ಅರಿಯದಲೆ ನಾನುಂಬೆನೆಂಬನು
ನಿರಯಗಳನುಂಬುವನು ನಿಶ್ಚಯ
ಮರಳಿಮರಳಿ ಭವಾಟವಿಯು ಸಂಚರಿಸಿ ಬಳಲುವನು ೬

ಸುರುಚಿ ರುಚಿರಸುಗಂಧ ಶುಚಿಯೆಂ
ದಿರುತಿಹನು ಷಡ್ರಸಗಳೊಳು ಹ
ನ್ನೆರಡು ರೂಪದಲಿಪ್ಪ ಶ್ರೀಭೂದುರ್ಗೆಯರ ಸಹಿತ
ಸ್ವರಮಣನು ಎಪ್ಪತ್ತೆರಡು ಸಾ
ವಿರನವಿಾರನ ರೂಪದೊಳ ಗಿ
ದ್ದುರುಪರಾಕ್ರಮಕರ್ತೃಯೆನಿಸುವ ನುಡಿಗಳೊಳಿದ್ದು ೭

ನಿಸ್ನ ಸರ್ವತ್ರದಲಿ ನೆನೆವವ
ರನ್ಯ ಕರ್ಮವ ಮಾಡಿದರು ಹರಿ
ಪುಣ್ಯ ಕರ್ಮಗಳೆನಿಸುವುವು ಸಂದೇಹವಿನಿತಿಲ್ಲ
ಸನ್ನ ಸ್ಮರಿಸದೆ ಸ್ನಾನ ಜಪ ಹೋ
ಮಾನ್ನ ವಸ್ತ್ರಗಜಾಶ್ವ ಭೂ ಧನ
ಧಾನ್ಯ ಮೊದಲಾದಖಿಳ ಧರ್ಮವ ಮಾಡಿ ಫಲವೇನು ೮

ಇಷ್ಟಭೋಗ್ಯ ಪದಾರ್ಥದೊಳು ವಿಶಿ
ಶಿಷ್ಟನಾಮದಿ ಸರ್ವಜೀವರ
ತುಷ್ಟಿ ಬಡಿಸುವ ದಿನದಿನದಿ ಸಂತುಷ್ಟ ತಾನಾಗಿ
ಕೋಷ್ಟದೊಳು ನಲಸಿದ್ದು ರಸಮಯ
ಪುಷ್ಟಿಯೈದಿಸು ತಿಂದ್ರಿಯಗಳೊಳು
ಪ್ರೇಷ್ಟನಾಗಿದ್ದೆಲ್ಲ ವಿಷಯಗಳುಂಬ ತಿಳಿಸದಲೆ ೯

ಕಾರಕಾಹ್ವಯ ಜ್ಞಾನಕರ್ಮ
ಪ್ರೇರಕನು ತಾನಾಗಿ ಕ್ರಿಯೆಗಳ
ತೋರುವನು ಕರ್ಮೇಂದ್ರಿಯಾಧಿಪರೊಳಗೆ ನೆಲಸಿದ್ದು
ಮೂರುಗುಣಮಯ ದ್ರವ್ಯಗತದಾ
ಕಾರ ತನ್ನಾಮದಲಿ ಕರೆಸುವ
ತೋರಿಕೊಳ್ಳದೆ ಜನರ ಮೋಹಿಪ ಮೋಹಕಲ್ಪಕನು ೧೦

ದ್ರವ್ಯನೆನಿಸುವ ಭೂತ ಮಾತ್ರದೊ
ಳವ್ಯಯನು ಕರ್ಮೇಂದ್ರಿಯಗಳೊಳು
ಭವ್ಯ ಸತ್ಕ್ರಿಯನೆನಿಪ ಜ್ಞಾನೇಂದ್ರಿಯಗಳೊಳಗಿದ್ದು
ಸ್ತವ್ಯ ಕಾರಕನೆನಿಸಿ ಸುಖಮಯ
ಸೇವ್ಯ ಸೇವಕನೆನಿಸಿ ಜಗದೊಳು
ಹವ್ಯವಾಹನ ನರಣಿಯೊಳಗಿಪ್ಪಂತೆ ಇರುತಿಪ್ಪ ೧೧

ಮನವೆ ಮೊದಲಾದಿಂದ್ರಿಯಗಳೊಳ
ಗನಿಳದೇವನು ಶುಚಿಯೆನಿಸಿಕೊಂ
ಡನವರತ ನೆಲೆಸಿಪ್ಪ ಶುಚಿಷದ್ಯೋತನೆಂದೆನಿಸಿ
ತನುವಿನೊಳಗಿಪ್ಪನು ಸದಾ ವಾ
ಮನ ಹೃಷೀಕೇಶಾಖ್ಯರೂಪವ
ಲನುಭವಕೆ ತಂದೀವ ವಿಷಯಜಸುಖವ ಜೀವರಿಗೆ ೧೨

ಪ್ರೇರಕ ಪ್ರೇರ್ಯರೊಳು ಪ್ರೇರ್ಯ
ಪ್ರೇರಕನು ತಾನಾಗಿ ಹರಿನಿ
ರ್ವೈರದಿಂದ ಪ್ರವರ್ತಿಸುವ ತನ್ನಾಮರೂಪದಲಿ
ತೋರಿಕೊಳ್ಳದೆ ಸರ್ವರೊಳು ಭಾ
ಗೀರಥಿಯ ಜನಕನು ಸಕಲ ವ್ಯಾ
ಪಾರಗಳ ತಾಮಾಡಿ ಮಾಡಿಸಿ ನೋಡಿನಗುತಿಪ್ಪ ೧೩

ಹರಿಯೆ ಮುಖ್ಯ ನಿಯಾಮಕನು ಎಂ
ದರಿದು ಪುಣ್ಯಾಪುಣ್ಯ ಹರುಷಾ
ಮರುಷ ಲಾಭಾಲಾಭ ಸುಖದುಃಖಾದಿ ದ್ವಂದ್ವಗಳ
ನಿರುತಲವನಂಘ್ರಿಗೆ ಸಮರ್ಪಿಸಿ
ನರಕ ಭೂಸ್ವರ್ಗಾಪವರ್ಗದಿ
ಕರಣನಿಯ್ಯಾಮಕನ ಸರ್ವತ್ರದಲಿ ನೆನೆಯುತಿರು ೧೪

ಮಾಣವಕ ತತ್ಫಲಗಳನು ಸಂ
ಧಾನವಿಲ್ಲದೆ ಕರ್ಮಗಳ ಸ್ವೇ
ಚ್ಛಾನುಸಾರದಿ ಮಾಡಿ ಮೋದಿಸುವಂತೆ ಪ್ರತಿದಿನದಿ
ಜ್ಞಾನ ಪೂರ್ವಕವಿಧಿನಿಷೇಧಗ
ಳೇನುನೋಡದೆ ಮಾಡುಕರ್ಮ ಪ್ರ
ಧಾನಪುರುಷೇಶನಲಿ ಭಕುತಿಯ ಬೇಡುಕೊಂಡಾಡು ೧೫

ಹಾನಿವೃದ್ಧಿ ಜಯಾಪಜಯಗಳ
ನೇನಕೊಟ್ಟುದ ಬುಂಜಿಸುತ ಲ
ಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದಿ
ಜ್ಞಾನಸುಖಮಯ ತನ್ನವರ ಸರ
ಮಾನುರಾಗದಿ ಸಂತಯಿಪ ದೇ
ಹಾನುಬಂಧಗಳಂತೆ ಒಳಹೊರಗಿದ್ದು ಕರುಣಾಳು ೧೬

ಆ ಪರಮ ಸಕಲೇಂದ್ರಿಯಗಳೊಳು
ವ್ಯಾಪಕನು ತಾನಾಗಿ ವಿಷಯವ
ತಾಪರಿಗ್ರಹಿಸುವನು ತಿಳಿಸದ ಸರ್ವಜೀವರೊಳು
ಪಾಪರಹಿತ ಪುರಾಣಪುರುಷ ಸ
ರೂಪದಲಿ ನೆಲೆಸಿದ್ದು ನಾನಾ
ರೂಪಧಾರಕ ತೋರಿಕೊಳ್ಳದ ಕರ್ಮಗಳ ಮಾಳ್ಪ ೧೭

ಖೇಚರರು ಭೂಚರರು ನಾರಿ ನಿ
ಶಾಚರರೊಳಿದ್ದವರ ಕರ್ಮಗ
ಳಾಚರಿಸುವನು ಘನಮಹಿಮ ಪರಮಾಲ್ಪನೋಪಾದಿ
ಗೋಚರಿಸನು ಬಹು ಪ್ರಕಾರಾ
ಲೋಚನೆಯ ಮಾಡಿದರು ಮನಸಿಗೆ
ಕೀಚಕಾರಿಯ ಪ್ರಿಯ ಕವಿ ಜನಗೇಯ ಮಹರಾಯ ೧೮

ಒಂದೆ ಗೋತ್ರ ಪ್ರವರ ಸಂಧ್ಯಾ
ವಂದನೆಗಳನು ಮಾಡಿ ಪ್ರಾಂತಕೆ
ತಂದೆತನಯರು ಬೇರೆ ತಮ್ಮಯ ಪೆಸರಗೊಂಬಂತೆ
ಒಂದೆದೇಹದೊಳಿದ್ದು ನಿಂದ್ಯಾ
ನಿಂದ್ಯ ಕರ್ಮವ ಮಾಡಿ ಮಾಡಿಸಿ
ಇಂದಿರೇಶನು ಸರ್ವಜೀವರೊಳೀಶನೆನಿಸುವನು ೧೯

ಕಿಟ್ಟಗಟ್ಟಿದ ಲೋಹಪಾವಕ
ಸುಟ್ಟುವಿಂಗಡಮಾಡುವಂತೆ ಘ
ರಟ್ಟ ವ್ರಿಹಿಗಳೊಳಿಪ್ಪ ತಂಡುಲ ಕಡೆಗೆ ತೆಗೆವಂತೆ
ನಿರ್ಮಲಾನೆಂದೊಮ್ಮೆ ನ್ಮೈಮರೆ
ದಟ್ಟಹಾಸದಿ ಕರೆಯೆ ದುರಿತಗ
ಳಟ್ಟುಳಿಯ ಬಿಡಿಸವನ ತನ್ನೊಳಗಿಟ್ಟು ಸಲಹುವನು ೨೦

ಜಲಧಿಯೊಳು ಸ್ವೇಚ್ಛಾನುಸಾರದಿ
ಜಲಚರಪ್ರಾಣಿಗಳು ತತ್ತತ್
ಸ್ಥಳಗಳಲಿ ಸಂತೋಷಪಡುತಲಿ ಸಂಚರಿಸುವಂತ
ನಳಿನನಾಭನೊಳಬ್ಜಭವನು
ಪ್ಪೊಳಲುರಿಗಮ್ಮೈಗಣ್ಣ ಮೊದಲಾ
ದ್ಹಲವು ಜೀವರಗಣವು ವರ್ತಿಸುತಿಹುದು ನಿತ್ಯದಲಿ ೨೧

ವಾಸುದೇವನು ಒಳಹೊರಗೆ ಆ
ಭಾಸಕನು ತಾನಾಗಿ ಬಿಂಬ ಪ್ರ
ಕಾಶಿಸುವ ತದ್ರೂಪ ತನ್ನಾಮದಲಿ ಸರ್ವತ್ರ
ಈಸಮನ್ವಯವೆಂದೆನಿಪ ಸದು
ಪಾಸನೆಯ ಗೈವವನು ಮೋಕ್ಷಾ
ಪೇಕ್ಷಿಗಳೊಳುತ್ತಮನು ಜೀವನ್ಮುಕ್ತನವನಿಯೊಳು ೨೨

ಭೋಗ್ಯವಸ್ತುಗಳೊಳಗೆ ಯೋಗ್ಯಾ
ಯೋಗ್ಯರಸಗಳನರಿತು ಯೋಗ್ಯಾ
ಯೋಗ್ಯರಲಿ ನೆಲೆಸಿಪ್ಪಹರಿಗೆ ಸಮರ್ಪಿಸನುದಿನದಿ
ಭಾಗ್ಯಬಡತನ ಬರಲು ಹಿಗ್ಗದೆ
ಕುಗ್ಗಿಸೊರಗದೆ ಸದ್ಭಕುತಿ ವೈ
ರಾಗ್ಯಗಳನೇ ಮಾಡು ನೀ ನಿರ್ಭಾಗ್ಯನೆನಿಸದಲೆ ೨೩

ಸ್ಥಳಜಲಾದ್ರಿಗಳಲ್ಲಿ ಜನಿಸುವ
ಫಲಸುಪುಷ್ಪಜಗಂಧರಸ ಶ್ರೀ
ತುಳಸಿ ಮೊದಲಾದಖಿಳಪೂಜಾ ಸಾಧನ ಪದಾರ್ಥ
ಹಲವು ಬಗೆಯಿಂದರ್ಪಿಸುತ ಬಾಂ
ಬೊಳೆಯ ಜನಕಗೆ ನಿತ್ಯನಿತ್ಯದಿ
ತಿಳಿವುದಿದು ವ್ಯತಿರೇಕಪೂಜೆಗಳೆಂದು ಕೋವಿದರು ೨೪

ಶ್ರೀಕರನ ಸರ್ವತ್ರದಲಿ ಅವ
ಲೋಕಿಸುತ ಗುಣರೂಪಕ್ರಿಯ ವ್ಯತಿ
ರೇಕ ತಿಳಿಯದಲನ್ವಯಿಸು ಬಿಂಬನಲಿ ಮರೆಯದಲೆ
ಸ್ವೀಕರಿಸುವನು ಕರುಣದಿಂದ ನಿ
ರಾಕರಿಸದೆ ಕೃಪಾಳು ಭಕ್ತರ
ಶೋಕಗಳ ಪರಿಹರಿಸಿ ಸುಖವಿತ್ತನವರತ ಪೊರೆವ ೨೫

ಇನಿತು ವ್ಯತಿರೇಕಾನ್ವಯಗಳಂ
ದೆನಿಪ ಪೂಜಾವಿಧಿಗಳನು ತಿಳಿ
ವನಿಸುಪೇಶನ ತೃಪ್ತಿಬಡಿಸುತಲಿರು ನಿರಂತರದಿ
ಘನಮಹಿಮ ಕೈಕೊಂಡು ಸ್ಥಿತಿಮೃತಿ
ಜನುಮಗಳ ಪರಿಹರಿಸಿ ಸೇವಕ
ಜನರೊಳಿಟ್ಟಾನಂದ ಬಡಿಸುವ ಭಕ್ತವತ್ಸಲನು ೨೬

ಜಲಜನಾಭನಿಗೆರಡು ಪ್ರತಿಮೆಗ
ಳಿಳೆಯೊಳಗೆ ಜಡ ಚೇತನಾತ್ಮಕ
ಚಲದೊಳೀರ್ಬಗೆ ಸ್ತ್ರೀಪುರುಷ ಭೇದವಲಿ ಜಡದೊಳಗೆ
ತಿಳಿವುದಾಹಿತ ಪ್ರತಿಮೆ ಸಹಜಾ
ಚಲಗಳೊಂದಿಬ್ಬಗೆ ಪ್ರತೀಕದಿ
ಲಲಿತ ಪಂಚತ್ರಯ ಸುಗೋಳಕವರಿತು ಭಜಿಸುತಿರು ೨೭

ವಾರಿಜಾಸನ ವಾಯುವೀಂದ್ರ ಉ
ಮಾರಮಣನಾಕೇಶ ಸ್ಮರಹಂ
ಕಾರಿಕ ಪ್ರಾಣಾದಿಗಳು ಪುರುಷರ ಕಳೇವರದಿ
ತೋರಿಕೊಳ ದನಿರುದ್ಧ ದೋಷ ವಿ
ದೂರ ನಾರಾಯಣನ ರೂಪ ಶ
ರೀರಮಾನಿಗಳಾಗಿ ಭಜಿಸುತ ಸುಖವ ಕೊಡುತಿಹರು ೨೮

ಸಿರಿಸರಸ್ವತಿ ಭಾರತೀ ಸೌ
ಪರಣಿವಾರುಣಿ ಪಾರ್ವತೀ ಮುಖ
ರಿಗುತಿಹರು ಸ್ತ್ರೀಯರೊಳಗಭಿಮಾನಿಗಳು ತಾನೆನಿಸೀ
ಅರುಣವರ್ಣನಿಭಾಂಗ ಶ್ರೀಸಂ
ಕರುಷಣ ಪ್ರದ್ಯುಮ್ನ ರೂಪಗ
ಳಿರಳು ಹಗಲೊಳುಪಾಸನೆಯ ಗೈವುತಲಿ ಮೋದಿಪರು ೨೯

ಕೃತಪ್ರತೀಕದಿ ಟಂಕಿ ಭಾರ್ಗವ
ಹುತವಹಾನಿಳ ಮುಖ್ಯದಿವಿಜರು
ತುತಿಸಿಕೊಳುತಭಿಮಾನಿಗಳು ತಾವಾಗಿ ನೆಲೆಸಿದ್ದು
ಪ್ರತಿದಿವಸ ಶ್ರೀತುಲಸಿ ಗಂಧಾ
ಕ್ಷತೆ ಕುಸುಮ ಫಲದೀಪ ಪಂಚಾ
ಮೃತದಿ ಪೂಜಿಪ ಭಕುತರಿಗೆ ಕೊಡುತಿಹರು ಪುರುಷಾರ್ಥ ೩೦

ನಗಗಳಭಿಮಾನಿಗಳೆನಿಪ ಸುರ
ರುಗಳು ಸಹಜಾಚಲಗಳಿಗೆ ಮಾ
ನಿಗಳೆನಿಸಿ ಶ್ರೀವಾಸುದೇವನ ಪೂಜಿಸುತಲಿಹರು
ಸ್ವಗತಭೇದ ವಿವರ್ಜಿತನ ನಾ
ಲ್ಬಗೆ ಪ್ರತೀಕದಿ ತಿಳಿದು ಪೂಜಿಸೆ
ವಿಗತ ಸಂಸಾರಾಬ್ಧಿ ದಾಟಿಸಿ ಮುಕ್ತರನು ಮಾಳ್ಪ ೩೧

ಆವಕ್ಷೇತ್ರಕ ಪೋದರೇ ನಿ
ನ್ನಾವ ತೀರ್ಥದಿ ಮುಳುಗಲೇ ನಿ
ನ್ನಾವಜಪತಪ ಹೋಮದಾನವ ಮಾಡಿ ಫಲವೇನು
ಶ್ರೀವರ ಜಗನ್ನಾಥ ವಿಠಲನ
ಈ ವಿಧದಿ ಜಂಗಮಸ್ಥಾವರ
ಜೀವರೊಳು ಪರಿಪೂರ್ಣನೆಂದರಿಯದಿಹ ಮಾನವರು ೩೨

ಅಂತು ಸಂಧಿ ೧೨ಕ್ಕೆ ಪದ್ಯಗಳು ೩೩೪ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು



## ಸಂಧಿ ೧೨. "ನಾಡಿ ಪ್ರಕ್ರಿಯ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದ ಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ವಾಸುದೇವನು ಪ್ರಾಣಮುಖ ತ
ತ್ವೇಶರಿಂದಲಿ ಸೇವೆ ಕೈಕೊಳು
ತೀಶರೀರದೊಳಿಪ್ಪ ಮೂವತ್ತಾರು ಸಾಹಸ್ರ
ಈಸುನಾಡಿಗಳೊಳಗೆ ಶ್ರೀಭೂ
ನಿವಾಸಮೇತ ವಿಹಾರಗೈವ ಪ
ರೇಶನಮಲ ಸುಮೂರ್ತಿಗಳ ಚಿಂತಿಸುತ ಹಿಗ್ಗುತಿರು ೧

ಚರಣಗಳೊಳಿಹ ನಾಡಿಗಳು ಹ
ನ್ನೆರಡುಸಾವಿರ ಮಧ್ಯದೇಹದೊ
ಳಿರುತಿಹವು ಹದಿನಾಲ್ಕು ಬಾಹುಗಳೊಳಗೆ ಈರರಡು
ಶಿರದೊಳಾರು ಸಹಸ್ರ ಚಿಂತಿಸು
ತಿರಳು ಹಗಲಭಿಮಾನಿದಿವಿಜರ
ನರಿತುಪಾಸನೆಗೈವರಿಳೆಯೊಳು ಸ್ವರ್ಗವಾಸಿಗಳು ೨

ಬೃಹತಿನಾಮಕ ವಾಸುದೇವನು
ವಹಿಸಿ ಸ್ತ್ರೀಪುರುಷಗಳ ದೋಷ ವಿ
ರಹಿತನೆಪ್ಪತ್ತೆರಡುಸಾವಿರ ನಾಡಿಗಳೊಳಿದ್ದು
ದೃಹಿಣಮೊದಲಾದಮರಗಣ ಸ
ನ್ಮಹಿತ ಸರ್ವಪ್ರಾಣಿಗಳ ಮಹ
ಮಹಿಮ ಸಂತೈಸುವನು ಸಂತತ ಪರಮ ಕರುಣಾಳು ೩

ನೂರುವರುಷಕೆ ದಿವಸ ಮೂವ
ತ್ತಾರ ಸಾವಿರವಹವು ನಾಡಿ ಶ
ರೀರದೊಳಗನಿತಿಹವು ಎಂದರಿತೊಂದು ದಿವಸದಲಿ
ಸೂರಗಳ ಸತ್ಕರಿಸಿದವ ಪ್ರತಿ
ವಾರದಲಿ ದಂಪತಿಗಳರ್ಚನೆ
ತಾರಚಿಸಿದವ ಸತ್ಯಸಂಶಯವಿಲ್ಲವೆಂದೆಂದು ೪

ಚತುರವಿಂಶತಿ ತತ್ವಗಳು ತ
ತ್ಪತಿಗಳನಿಸುವ ಬ್ರಹ್ಮಮುಖ ದೇ
ವತೆಗಳನುದಿನ ಪ್ರತಿಪ್ರತೀನಾಡಿಗಳೊಳಿರುತಿದ್ದು
ಚತುರದಶಲೋಕದೊಳು ಜೀವ
ಪ್ರತತಿಗಳ ಸಂರಕ್ಷಿಸುವ ಶಾ
ಶ್ವತನ ತತ್ತತ್ಸ್ಥಾನದಲಿ ನೋಡುತಲೆ ಮೋದಿಪ್ಪುದು ೫

ಸತ್ಯಸಂಕಲ್ಪನು ಸದಾ ಎ
ಪ್ಪತ್ತೆರಡು ಸಾಹಸ್ರದೊಳು ಮೂ
ವತ್ತುನಾಲಕುಲಕ್ಷದೈವತ್ತಾರು ಸಾಹಸ್ರ
ಚಿತ್ರಕೃತಿಯೊಡಗೂಡಿ ಪರಮ ಸು
ನಿತ್ಯಮಂಗಳಮೂರ್ತಿ ಭಕ್ತರ
ತೆತ್ತಿಗನು ತಾನಾಗಿ ಸರ್ವತ್ರದಲಿ ಸಂತೈಪ ೬

ಮಣಿಗಳೊಳಗಿಹ ಸೂತ್ರದಂದದಿ
ಪ್ರಣವಪಾದ್ಯನು ಸರ್ವಚೇತನ
ಗಣದೊಳಿದ್ದನವರತ ಸಂತೈಸುವನು ತನ್ನವರ
ಪ್ರಣತಕಾಮದ ಭಕ್ತಚಿಂತಾ
ಮಣಿ ಚಿದಾನಂದೈಕದೇಹನು
ಅಣುಮಹದ್ಗತನಲ್ಪರೋಪಾದಿಯಲಿ ನೆಲೆಸಿಪ್ಪ ೭

ಈ ಸುಷುಮ್ನಾದ್ಯಖಿಳನಾಡೀ
ಕೋಶನಾಭೀ ಮೂಲದಲಿ ವೃಷ
ಣಾಸನದ ಮಧ್ಯದಲಿ ಇಪ್ಪದು ತುಂದಿನಾಮದಲಿ
ಆಸರೋಜಾಸನ ಮುಖರು ಮೂ
ಲೇಶನಾನಂದಾದಿ ಸುಗುಣೋ
ಪಾಸನೆಯ ಗೈವುತಲಿ ದೇಹಗಳೊಳಗೆ ಇರುತಿಹರು ೮

ಸೂರಿಗಳು ಚಿಂತ್ಯೈಸುವುದು ಭಾ
ಗೀರಥಿಯೆ ಮೊದಲಾದ ತೀರ್ಥಗ
ಳೀರಧಿಕ ಎಪ್ಪತ್ತುಸಾವಿರ ನಾಡಿಯೊಳಗಿಹವು
ಈರಹಸ್ಯವ ನಲ್ಪಜನರಿಗೆ
ತೋರಿಪೇಳದೆ ನಾಡಿನದಿಯೊಳು
ಧೀರರನುದಿನ ಮಜ್ಜನವಮಾಡುತಲೆ ಸುಖಿಸುವರು ೯

ತಿಳವುದೀದೇಹದೊಳಗಿಹ ಎಡ
ಬಲದನಾಡಿಗಳೊಳಗೆ ದಿವಿಜರು
ಜಲಜಸಂಭವ ವಾಯುವಾಣ್ಯಾದಿಗಳು ಬಲದಲ್ಲ
ಎಲರುಣಿಗ ವಿಹಗೇಂದ್ರ ಚಳಿವೆ
ಟ್ಟಳಿಯ ಷಣ್ಮಹಿಷಿಯರು ವಾರುಣಿ
ಕುಲಿಶಧರ ಕಾಮಾದಿಗಳು ಎಡಭಾಗದೊಳಗಿಹರು ೧೦

ಇಕ್ಕೆಲದೊಳಿಹ ನಾಡಿಯೊಳು ದೇ
ವಕ್ಕಳಿಂದೊಡನಾಡುತಲಿ ಪೊಂ
ಬಕ್ಕಿದೇರನು ಜೀವರಧಿಕಾರಾನುಸಾರದಲಿ
ತಕ್ಕಸಾಧನ ಮಾಡಿ ಮಾಡಿಸು
ತಕ್ಕರದಿ ಸಂತೈಪ ಭಕ್ತರ
ದಕ್ಕಗೊಡನಸುರರಿಗೆ ಸತ್ಪುಣ್ಯಗಳನಪಹರಿಪ ೧೧

ತುಂದಿವಿಡಿದಾಶಿರದ ಪರಿಯಂ
ತೊಂದೆ ವ್ಯಾಪಿಸಿ ಇಹುದು ತಾವರೆ
ಕಂದನಿಹನದರೊಳಗೆ ಅದಕೆಂರ್ರ್ದ ಶಾಖೆಗಳು
ಒಂದಧಿಕ ದಶಕರಣಗಳು ಸಂ
ಬಂಧಗೈದಿಹವಲ್ಲ ರವಿಶಶಿ
ಸಿಂಧುನಾಸತ್ಯಾದಿಗಳು ನೆಲೆಗೊಂಡಿಹರು ಸತತ ೧೨

ಪೊಕ್ಕಳಡಿವಿಡಿದೊಂದೆ ನಾಡಿಯು
ಸೂಕ್ಷ್ಮದಲಿ ಧಾರಾಳ ರೂಪದಿ
ಸಿಕ್ಕಿಹುದು ನಡ ದೇಹದೊಳಗೆ ಸುಷುಮ್ನ ನಾಮದಲಿ
ರಕ್ಕಸರನೊಳಪೊಗಗೊಡದೆ ದಶ
ದಿಕ್ಕಿನೊಳಗೆ ಸಮೀರದೇವನು
ಲೆಕ್ಕಿಸದೆ ಮತ್ತೊಬ್ಬರನು ಸಂಚರಿಸ ದೇಹದೊಳು ೧೩

ಇನಿತು ನಾಡೀಶಾಖೆಗಳು ಈ
ತನುವಿನೊಳಗಿಹವೆಂದು ಏಕಾ
ತ್ಮನು ದ್ವಿಸಪ್ತತಿ ಸಾವಿರಾತ್ಮಕನಾಗಿ ನಾಡಿಯೊಳು
ವನಿತೆಯಿಂದೊಡಗೂಡಿ ನಾರಾ
ಯಣ ದಿವಾ ರಾತ್ರಿಯೊಳಗೀಪರಿ
ವನಜಜಾಂಡದೊಳಖಿಳ ಜೀವರೊಳಿದ್ದು ಮೋಹಿಸುವ ೧೪

ದಿನದಿನದಿ ವರ್ಧಿಸುವ ಕುಮುದಾ
ಪ್ತನ ಮಯೂಖದ ಸೊಬಗ ಗತಲೋ
ಚನ ವಿಲೋಕಿಸಿ ಮೋದಬಡಬಲ್ಲನೆ ನಿರಂತರದಿ
ಕುನರಗೀ ಸುಕಥಾಮೃತದ ಭೋ
ಜನದ ಸುಖದೊರಕುವುದೆ ಲಕುಮೀ
ಮನಹರನ ಸದ್ಗುಣವ ಕೀರ್ತಿಸ ಭಕುತಗಲ್ಲದಲೆ ೧೫

ಈ ತನುವಿನೊಳಗಿಹವು ಓತ
ಪ್ರೋತರೂಪದಿ ನಾಡಿಗಳು ಪುರು
ಹೂತ ಮುಖರಲ್ಲಿಹರು ತಮ್ಮಿಂದಧಿಕರೊಡಗೂಡಿ
ಭೀತಿಗೊಳಿಸುತ ದಾನವರ ಸಂ
ಘಾತನಾಮಕ ಹರಿಸುಗುಣ ಸಂ
ಪ್ರೀತಿಯಲಿ ಸದುಪಾಸನೆಯ ಗೈಯುತಲಿ ಮೋದಿಪರು ೧೬

ಜಲಟ ಕುಕ್ಕುಟ ಖೇಟಜೀವರ
ಕಳವರಗಳೊಳಗಿದ್ದು ಕಾಣಿಸಿ
ಕೊಳದೆ ತತ್ತದ್ರೂಪ ತನ್ನಾಮದಲಿ ಕರೆಸುತಲಿ
ಜಲರುಹೇಕ್ಷಣ ವಿವಿಧ ಕರ್ಮಂ
ಗಳ ನಿರಂತರಮಾಡಿ ತತ್ತ
ತ್ಫಲಗಳುಣ್ಣದೆ ಸಂಚರಿಸುವನು ನಿತ್ಯ ಸುಖಪೂರ್ಣ ೧೭

ತಿಳಿದುಪಾಸನೆಗೈಯುತೀಪರಿ
ಮಳಿನನಂತಿರು ದುರ್ಜನರ ಕಂ
ಗಳಿಗೆ ಗೋಚರಿಸದೆ ವಿಪಶ್ಚಿತರೊಡನೆ ಗರ್ವಿಸದೆ
ಮಳೆಬಿಸಿಲು ಹಸಿತೃಷೆ ಜಯಾಜಯ
ಖಳರ ನಿಂದಾನಿಂದೆ ಭಯಗಳಿ
ಗಳುಕದಲೆ ಮದ್ದಾನೆಯಂದದಿ ಚರಿಸು ಧರೆಯೊಳಗೆ ೧೮

ಕಾನನ ಗ್ರಾಮಸ್ಥ ಸರ್ವ
ಪ್ರಾಣಿಗಳು ಪ್ರತಿದಿವಸದಲಿ ಏ
ನೇನು ಮಾಡುವ ಕರ್ಮಗಳು ಹರಿಪೂಜೆಯೆಂದರಿದು
ಧೇನಿಸುತೆ ಸದ್ಭಕ್ತಿಯಲಿ ಪವ
ಮಾನ ಮುಖ ದೇವ ಂತರಾತ್ಮಕ
ಶ್ರೀನಿವಾಸಗರ್ಪಿಸುತ ಮೋದಿಸುತ ನಲಿಯುತಿರು ೧೯

ನೋಕನೀಯನು ಲೋಕದೊಳು ಶುನಿ
ಸೂಕರಾದಿಗಳೊಳಗೆ ನೆಲೆಸಿ
ದ್ವೇಕಮೇವಾದ್ವಿತಿಯ ಬಹುರೂಪಾಹ್ವಯಗಳಿಂದ
ತಾಕರೆಸುತೊಳಗಿದ್ದು ತಿಳಿಸದೆ
ಶ್ರೀ ಕಮಲಭವ ಮುಖ್ಯ ನಾಕಿ ದಿ
ವೌಕಸಗಣಾರಾಧ್ಯ ಕೈಕೊಂಡನುದಿನದಿ ಪೊರೆವ ೨೦

ಇನಿತುಪಾಸನೆಗೈಯುತಿಹ ಸ
ಜ್ಜನರು ಸಂಸಾರದಿ ಪ್ರತಿಪ್ರತಿ
ದಿನಗಳಲಿ ಏನೇನು ಮಾಡುವುದೆಲ್ಲ ಹರಿಪೂಜೆ
ಎನಿಸಿಕೊಂಬವು ಸತ್ಯವೀ ಮಾ
ತಿನಲಿ ಸಂಶಯಬಡುವ ನರನ
ಲ್ಲಿನ ಸುನಿಶ್ಚಯ ಬಾಹ್ಯ ಕರ್ಮವಮಾಡಿ ಫಲವೇನು ೨೧

ಭೋಗ್ಯ ಭೋಕ್ತೃಗಳೊಳಗೆ ಹರಿತಾ
ಭೋಗ್ಯ ಭೋಕ್ತನು ಎನಿಸಿ ಯೋಗ್ಯಾ
ಯೋಗ್ಯ ರಸಗಳ ದೇವ ದಾನವಗಣಕೆ ಉಣಿಸುವನು
ಭಾಗ್ಯನಿಧಿ ಭಕ್ತರಿಗೆ ಸದ್ವೈ
ರಾಗ್ಯ ಭಕ್ತಿಜ್ಞಾನವೀವಾ
ಯೋಗ್ಯರಿಗೆ ದ್ವೇಷಾದಿಗಳ ತನ್ನಲ್ಲೆ ಕೊಡುತಿಪ್ಪ ೨೨

ಈ ಚತುರ್ದಶ ಭುವನದೊಳಗೆ ಚ
ರಾಚರಾತ್ಮಕ ಜೀವರಲ್ಲಿ ವಿ
ರೋಚನಾತ್ಮಜ ವಂಚಕನು ನೆಲೆಸಿದ್ದು ದಿನದಿನದಿ
ಯಾಚಕನು ಎಂದೆನಿಸಿಕೊಂಬ ಮ
ರೀಚ ದಮನನು ಹಂಸರೂಪಿ ನಿ
ಷ್ಪಂಚ ಕಾಹ್ವಯನಾಗಿ ಜನರಭಿಲಾಷ ಪೂರೈಸ ೨೩

ಅನ್ನದನ್ನಾದನ್ನಮಯ ಸ್ವಯ
ಮನ್ನ ಬ್ರಹ್ಮಾದ್ಯಖಿಳ ಚೇತನ
ಕನ್ನಕಲ್ಪಕನಾಗಿ ಅನಿರುದ್ಧಾದಿ ರೂಪದಲಿ
ಅನ್ಯರನಪೇಕ್ಷಿಸದೆ ಗುಣಕಾ
ರುಣ್ಯ ಸಾಗರ ಸೃಷ್ಟಿಸುವನು ಹಿ
ರಣ್ಯಗರ್ಭನೊಳಿದ್ದು ಪಾಲಿಸುವನು ಜಗತ್ರಯವ ೨೪

ತ್ರಿಪದ ತ್ರಿದಶಾಧ್ಯ ಕ್ಷತ್ರಿಸ್ಥಾ
ತ್ರಿಪಥಗಾಮಿನಿ ಪಿತ ತ್ರಿವಿಕ್ರಮ
ಕೃಪಣವತ್ಸಲ ಕುವಲಯದಳಶ್ಯಾಮ ನಿಸ್ಸೀಮ
ಅಪರಿಮಿತ ಚಿತ್ಸುಖ ಗುಣಾತ್ಮಕ
ವಪುಷ ವೈಕುಂಠಾದಿ ಲೋಕಾ
ಧಿಪ ತ್ರಯೀಮಯ ತನ್ನವರ ನಿಷ್ಕಪಟದಿಂ ಪೊರೆವ ೨೫

ಲವಣ ಮಿಶ್ರಿತ ಜಲವು ತೋರ್ಪುದು
ಲವಣದೋಪಾದಿಯಲಿ ಜಿಹ್ವೆಗೆ
ವಿವರಗೈಸಲು ಶಕ್ಯವಾಗುವುದೇನೊ ನೋಳ್ಪರಿಗೆ
ಸ್ವವಶವ್ಯಾಪೀಯೆನಿಸಿ ಲಕ್ಷ್ಮೀ
ಧವ ಚರಾಚರದೊಳಗೆ ತುಂಬಿಹ
ನವಿದಿತನ ಸಾಕಲ್ಯ ಬಲ್ಲವರಾರು ಸುರರೊಳಗೆ ೨೬

ವ್ಯಾಪ್ಯನಂದದಿ ಸರ್ವಜೀವರೊ
ಳಿಪ್ಪ ಚಿನ್ಮಯಘೋರ ಭವಸಂ
ತಪ್ಯ ಮಾನರು ಭಜಿಸೆ ಭಕುತಿಯಲಿಂದಲಿಹಪರದಿ
ಪ್ರಾಪ್ಯನಾಗುವ ನವರಪಗುಣಗ
ಳೊಪ್ಪುಗೊಂಬನು ಭಕ್ತವತ್ಸಲ
ತಪ್ಪಿಸುವ ಬಹುಜನ್ಮದೋಷಗಳವರಿಗನವರತ ೨೭

ಹಲವು ಬಗೆಯಲಿ ಹರಿಯು ಮನದೊಳ
ಗೊಲಿಸಿ ನಿಲ್ಲಿಸಿ ಏನುಮಾಡುವ
ಕೆಲಸಗಳು ಅಪವರ್ಗ ಪೂಜೆಗಳೆಂದು ನೆನೆಯುತಿರು
ಹಲಧರಾನುಜತಾನೆ ಸರ್ವ
ಸ್ಥಳಗಳಲಿ ನೆಲೆಸಿದ್ದು ನಿಶ್ಚಂ
ಚಲ ಭಕುತಿ ಸುಜ್ಞಾನ ಭಾಗ್ಯವ ಕೊಟ್ಟು ಸಂತೈಪ ೨೮

ದೋಷ ಗಂಧ ವಿದೂರ ನಾನಾ
ವೇಷಧಾರಕನೀ ಜಗತ್ರಯ
ಪೋಷಕ ಪುರಾತನ ಪುರುಷ ಪುರುಹೂತಮುಖ ವಿನುತ
ಶೇಷವರ ಪರಿಯಂಕಶಯನ ವಿ
ಭೀಷಣಪ್ರಿಯ ವಿಜಯಸಖ ಸಂ
ತೋಷಪಡಿಸುವ ಸುಜನರಿಷ್ಟಾರ್ಥಗಳ ಪೂರೈಸಿ ೨೯

ಶ್ರೀ ಮಹೀಸೇವಿತ ಪದಾಂಬುಜ
ಭೂಮಸದ್ಭಕ್ತೈಕ ಲಭ್ಯ ಪಿ
ತಾಮಹಾದ್ಯಮರಾ ಸುರಾರ್ಚಿತ ಪಾದಪಂಕೇಜ
ವಾಮ ವಾಮನ ರಾಮ ಸಂಸಾ
ರಾಮ ಯೌಷಧ ಹೇಮ ಮಕುಲ
ಸ್ವಾಮಿ ಸಂತೈಸೆನಲು ಬಂದೊದಗುವವ ಕರುಣಾಳು ೩೦

ದನುಜ ದಿವಿಜರೊಳಿದ್ದು ಅವರವ
ರನುಸರಿಸಿ ಕರ್ಮಗಳ ಮಾಳ್ಪನು
ಜನನ ಮರಣಾದ್ಯಖಿಳ ದೋಷವಿದೂರನೆನ್ಮೊಡನೆ
ಜನಿಸುತನು ಜೀವಿಸುವ ಸಂಡ
ಕ್ಷಣೆಯ ಮಾಡುವನೆಲ್ಲಕಾಲದಿ
ಧನವ ಕಾಯ್ವಹ ಸರ್ಪನಂತನಿಮಿತ್ತ ಬಾಂಧವನು ೩೧

ಬಿಸರುಹಾಪ್ತಾಗಸದಿ ತಾನುದ
ಯಿಸಲು ವೃಕ್ಷಂಗಳ ನೆಳಲು ಪಸ
ರಿಸುವ ವಿಳೆಯೊಳಗಸ್ತಮಿಸಲಲ್ಲಲ್ಲೆ ಲೀನಹುವು
ಶ್ವಸನ ಮುಖ್ಯಮರಾಂತರಾತ್ಮಕ
ನೊಶದೊಳಿರುತಿಪ್ಪುವು ಜಗತ್ರಯ
ಬಸುರೊಳಿಂಬಿಟ್ಟಿಲ್ಲ ಕರ್ಮವ ತೋರ್ಪ ನೋಳ್ಪರಿಗೆ ೩೨

ತ್ರಿಭುವನೈಕಾರಾಧ್ಯ ಲಕ್ಷ್ಮಿ ಶ್ರೀ
ಸುಭುಜಯುಗಳಾಲಿಂಗಿತಾಂಗ
ಸ್ವಭು ಸುಖಾತ್ಮ ಸುವರ್ಣ ವರ್ಣ ಸುಪರ್ಣ ವರವಹನ
ಅಭಯದಾನಂತಾರ್ಕಶಶಿ ಸ
ನ್ನಿಭ ನಿರಂಜನ ನಿತ್ಯದಲಿ ತನ
ಗಭಿನಮಿಸುವರಿಗೀವ ಸರ್ವಾರ್ಥಗಳ ತಡೆಯದಲೆ ೩೩

ಕವಿಗಳಿಂದಲಿ ತಿಳಿದು ಪ್ರಾತ
ಸ್ಸವನ ಮಾಧ್ಯಂದಿನವು ಸಾಯವು
ಸವನಗಳ ವಸುರುದ್ರರಾದಿತ್ಯರೊಳು ರಾಜಿಸುವ
ಪವನನೊಳು ಕೃತಿಜಯ ಸುಮಾಯಾ
ಧವನ ಮೂರ್ತಿತ್ರಯವ ಚಿಂತಿಸಿ
ದಿವಸವೆಂಬಾಹುತಿಗಳಿಂದರ್ಚಿಸುತ ಸುಖಿಸುತಿರು ೩೪

ಚತುರ ವಿಂಶತ್ಯಬ್ದ ವಸುದೇ
ವತೆಗಳೊಳು ಪ್ರದ್ಯುಮ್ನ ನಿಪ್ಪನು
ಚತುರ ಚತ್ವಾರಿಂಶತಿಗಳಲಿ ಸಂಕರುಷಣಾಖ್ಯ
ಹುತವಹಾಕ್ಷನೊಳಿಹನು ಮಾಯಾ
ಪತಿಯು ಹದಿನಾರಧಿಕ ದ್ವಾತ್ರಿಂ
ಶತಿ ವರುಷಗಳಲಿಪ್ಪ ನಾದಿತ್ಯನೊಳು ಸಿತಕಾಯ ೩೫

ಷೋಡಶೋತ್ತರ ಶತವಶುಪದಲಿ
ಷೋಡಶೋತ್ತರ ಶತಸುರೂಪದಿ
ಕ್ರೀಡಿಸುವ ವಸುರುದ್ರರಾದಿತ್ಯರೊಳು ಸತಿಸಹಿತ
ವ್ರೀಡಸಲ್ಲಿದೆ ಭಜಿಪ ಭಕ್ತರ
ಪೀಡಿಸುವ ದುರಿತೌಘಗಳ ದೂ
ರೋಡಿಸುತ ಬಳಿಯೊಳು ಬಿಡದೆ ನೆಲೆಸಿಪ್ಪ ಭಯಹಾರಿ ೩೬

ಮೂರಧಿಕ ಎಂಭತ್ತು ಸಹಸ್ರ
ನೂರಯಿಪ್ಪತ್ತೆನಿಪ ರೂಪದಿ
ತೋರುತಿಪ್ಪ ದಿವಾ ನಿಶಾಧಿಪರೊಳಗೆ ನಿತ್ಯದಲಿ
ಭಾರತೀ ಪ್ರಾಣರೊಳಗಿದ್ದು ನಿ
ವಾರಿಸುತ ಭಕ್ತರ ದುರಿತ ಓಂ
ಕಾರಸಿಧನ ಪ್ರಥಮರೂಪದಿ ಪಿತೃಗಳನೆ ಪೊರೆವ ೩೭

ಬುದ್ಧಿಪೂರ್ವಕ ಉತ್ತಮೋತ್ತಮ
ಶುದ್ಧ ಪೂರ್ಣಾಂಬರವ ಪಂಕದೊ
ಳದ್ದಿ ತೆಗೆಯಲು ಲೇಪವಾಗುವುದೇ ಪರೀಕ್ಷಿಸಲು
ಪದ್ಮನಾಭನು ಸರ್ವಜೀವರೊ
ಳಿದ್ದರೇನು ಗುಣತ್ರಯಗಳಿಂ
ಬದ್ಧನಾಗುವನೇಸೊ ನಿತ್ಯಸುಖಾತ್ಮ ಚಿನ್ಮಯನು ೩೮

ಸಕಲದೋಷ ವಿದೂರ ಶಶಿಪಾ
ವಕ ಸಹಸ್ರಾನಂತ ಸೂರ್ಯ
ಪ್ರಕರ ಸನ್ನಿಭಗಾತ್ರ ಲಕುಮಿ ಕಳತ್ರ ಸುರಮಿತ್ರ
ವಿಖನ ಸಾಂಡದೊಳಿಪ್ಪ ಬ್ರಹ್ಮಾ
ದ್ಯಖಿಳ ಚೇತನಗಣಕೆ ತಾನೇ
ಸಖನೆನಿಸಿಕೊಂಡಕುಟಿಲಾತ್ಮಕನಿಪ್ಪನವರಂತೆ ೩೯

ದೇಶ ಭೇದಗಳಲ್ಲಿ ಇಪ್ಪಾ
ಕಾಶದೋಪಾದಿಯಲಿ ಚೇತನ
ರಾಶಿಯೊಳು ನೆಲೆಸಿಪ್ಪ ನವ್ಯವಧಾನದಲಿ ನಿರುತ
ಶ್ರೀ ಸಹಿತ ಸರ್ವತ್ರ ವಿರವಾ
ಕಾಶ ಕೊಡುವಂದದಲಿ ಕೊಡುತ ನಿ
ರಾಶಯಲಿ ಸರ್ವಾಂತರಾತ್ಮಕ ಶೋಭಿಸುವ ಸುಖದ ೪೦

ಶ್ರೀ ವಿರಂಚಾದ್ಯಮರಗಣ ಸಂ
ಸೇವಿತಾಂಘ್ರಿ ಸರೋಜ ನೀ ಜಡ
ಜೀವರಾಶಿಗಳೊಳ ಹೊರಗೆ ನೆಲೆಸಿದ್ದು ನಿತ್ಯದಲಿ
ಸಾವಕಾಶನು ಎನಿಸಿ ತನ್ನ ಕ
ಳೇವರದೊಳಂಬಿಟ್ಟು ಸಲಹುವ
ದೇವ ದೇವಕಿರಮಣ ದಾನವಹರಣ ಜಿತಮರಣ ೪೧

ಮಾಸವೊಂದಕೆ ಪ್ರತಿದಿವಸದಲಿ
ಶ್ವಾಸಗಳು ಅಹುವಷ್ಟು ಚತ್ವಾ
ರಿಂಶತಿ ಸಹಸ್ರಾಧಿಕಾರು ಸುಲಕ್ಷ ಸಂಖ್ಯೆಯಲಿ
ಹಂಸ ನಾಮಕ ಹರಿಯ ಷೋಡಶ
ಈ ಶತಾಬ್ದದಿ ಭಜಿಸಲೊಲಿವ ದ
ಯಾ ಸಮುದ್ರ ಕುಚೇಲ ಗೊಲಿದಂದದಲಿ ದಿನದಿನದಿ ೪೨

ಸ್ಥೂಲದೇಹದೊಳಿದ್ದು ವರುಷಕೆ
ಏಳಧಿಕ ಎಪ್ಪತ್ತು ಲಕ್ಷದ
ಮೇಲೆ ಎಪ್ಪತ್ತಾರುಸಾವಿರ ಶ್ವಾಸ ಜಪಗಳನು
ಗಾಳಿದೇವನು ಕರುಣದಲಿ ಈ
ರೇಳು ಲೋಕದೊಳುಳ್ಳ ಚೇತನ
ಜಾಲದೊಳು ಮಾಡುವನು ತ್ರಿಗಜದ್ವ್ಯಾಪ್ತ ಪರಮಾಪ್ತ ೪೩

ಈರೆರಡು ದೇಹಗಳೊಳಿದ್ದು ಸ
ಮೀರ ದೇವನು ಶ್ವಾಸಜಪ ನಾ
ನೂರಧಿಕವಾಗಿಪ್ಪ ಎಂಭತ್ತಾರು ಸಾಹಸ್ರ
ತಾರಚಿಸುವನು ದಿವಸವೊಂದಕೆ
ಮೂರುವಿಧ ಜೀವರೊಳಗಿದ್ದು ಖ
ರಾರಿ ಕರುಣಾ ಬಲವದೆಂತುಟೊ ಪವನರಾಯನೊಳು   ೪೪

ಶ್ರೀಧವ ಜಗನ್ನಾಥ ವಿಠಲನು
ತಾ ದಯದಿ ಪವನನೊಳು ನುಡಿಸೇ
ಪಾದಿಪಲಿ ನಾನುಡಿದೆ ನಲ್ಲದೆ ಕೇಳಿ ಬುಧಜನರು
ಸಾಧು ಲಿಂಗ ಪ್ರದರ್ಶಕರುಸಿ
ಸಂಶೋಧಿಸಿದರೇನಹುದು ಎನ್ನಸ
ರಾಧನೇಸಿದರೂನಗೆ ಸೇಳ್ಪುವರು ತಿಳಿದು ಕೊಂಡಿದರು   ೪೫

ಅಂತು ಸಂಧಿ ೧೨ಕ್ಕೆ ಪದ್ಯಗಳು ೩೭೭ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು



## ಸಂಧಿ ೧೪ “ನಾಮಸ್ಮರಣೆ ಸಂಧಿ”

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಮಕ್ಕಳಾಡಿಸುವಾಗ ಮಡದಿಯೊ
ಳಕ್ಕರದಿ ನಲಿವಾಗ ಹಯಪ
ಲ್ಲಕ್ಕಿಗಜಮೊದಲಾದ ವಾಹನವೇರಿ ಮೆರವಾಗ
ಬಿಕ್ಕುವಾಗಾಕಳಿಸುತಲಿ ದೇ
ವಕ್ಕಿತನಯನ ನೆನೆಯುತಿಹ ನರ
ಸಿಕ್ಕನೆಮದೂತರಿಗೆ ಆವಾವಲ್ಲಿ ನೋಡಿದರು ೧

ಸರಿತು ಪ್ರವಹಗಳಲ್ಲಿ ದಿವ್ಯಾಂ
ಬರದಿ ಪತ್ರಾದಿಯಲಿ ಹರುಷಾ
ಮರುಷ ವಿಸ್ಮೃತಿಯಿಂದಲಾಗಲಿ ಒಮ್ಮೆ ಬಾಯ್ದೆರದು
ಹರಿ ಹರೀ ಹರಿಯೆಂಬ ಎರಡ
ಕ್ಷರ ನುಡಿದ ಮಾತ್ರದಲಿ ದುರಿತಗ
ಳಿರದೆ ಪೋಪುವು ತೂಲರಾಶಿಯೊಳನಳ ಪೊಕ್ಕಂತೆ ೨

ಮಲಗುವಾಗಲಿ ಏಳುವಾಗಲಿ
ಕುಳಿತು ಮಾತಾಡುತಲಿ ಮನೆಯೊಳು
ಕೆಲಸಗಳ ಮಾಡುತಲಿ ಮೈದೊಳೆವಾಗ ಮೆಲುವಾಗ
ಕಲುಷದೂರನ ಸಕಲ ಠಾವಿಲಿ
ತಿಳಿಯೆ ತತ್ತನ್ನಾಮ ರೂಪವ
ಬಳಿಯಲಿಪ್ಪನು ಒಂದರಕ್ಷಣ ಬಿಟ್ಟಗಲನವರ ೩

ಆವ ಕುಲದವ ನಾದೊಡೇ ನಿ
ನ್ನಾವ ದೇಶದೊಳಿದ್ದೊಡೇ ನಿ
ನ್ನಾವ ಕರ್ಮವ ಮಾಡಲೇ ನಿನ್ನಾವ ಕಾಲದಲಿ
ಶ್ರೀವರನ ಸರ್ವತ್ರದಲಿ ಸಂ
ಭಾವಿಸುತ ಪೂಜಿಸುತ ವಂದಿಸು
ಕೋವಿದರಿಗುಂಟೇನೊ ಭಯದುಃಖಾದಿ ದ್ವಂದ್ವಗಳು ೪

ವಾಸುದೇವನ ಗುಣಸಮುದ್ರ ದೊ
ಳೀಸಬಲ್ಲವ ಭವ ಸಮುದ್ರಾ
ಯಾಸವಿಲ್ಲದೆ ದಾಟುವನು ಶೀಘ್ರದಲಿ ಜಗದೊಳಗೆ
ಜನಪದೆ ದುರ್ವಿಷಯಗಳ ಸಖ
ಲಾಸೆಯಲಿ ಬಳಲುವವ ನಾನಾ
ಕ್ಲೇಶಗಳನನುಭವಿಪ ಭಕ್ತಿ ಸುಮಾರ್ಗ ಕಾಣದಲೆ ೫

ಸ್ನಾನ ಜಪ ದೇವಾರ್ಚನೆಯು ವ್ಯಾ
ಖ್ಯಾನ ಭಾರತಮುಖ ಪುರೋಪ ಪು
ರಾಣ ಕಥೆಗಳ ಪೇಳಿ ಕೇಳಿದರೇನು ದಿನದಿನದಿ
ಜ್ಞಾನ ಕರ್ಮೇಂದ್ರಿಯಗಳಿಂದೇ
ನೇನು ಮಾಡುವ ಕರ್ಮಗಳ ಲ
ಕ್ಷ್ಮೀನಿವಾಸನ ಪೂಜೆಯೆಂದರ್ಪಿಸದ ಮಾನವನು ೬

ದೇವ ಗಂಗೆಯೊಳುಳ್ಳವಗೆ ದುರಿ
ತಾವಳಿಗಳುಂಟೇ ವಿಚಾರಿಸೆ
ಸಾವುಗಳ ಭಯವುಂಟೆ ವಿಹಗಾಧಿಪನ ಮಂದಿರದಿ
ಜೀವ ಕರ್ತೃತ್ವವನು ಮರೆದು ಪ
ರಾವರೇಶನೆ ಕರ್ತೃಯೆಂದರಿ
ದಾವ ಕರ್ಮವ ಮಾಡಿದರು ಲೇಪಿಸವು ಕರ್ಮಗಳು ೭

ಏನುಮಾಡುವ ಪುಣ್ಯಪಾಪಗ
ಳಾನೆ ಮಾಡುವೆ ನೆಂಬುವಾಧಮ
ಹೀನ ಕರ್ಮಕೆ ಪಾತ್ರನಾ ಪುಣ್ಯಕ್ಕೆ ಹರಿಯೆಂಬ
ಮಾನವನು ಮಧ್ಯಮನು ದ್ವಂದ್ವಕೆ
ಶ್ರೀನಿವಾಸನೆ ಕರ್ತೃವೆಂದು ಸ
ದಾನುರಾಗದಿ ನೆನೆದು ಸುಖಿಸುವರೀ ನರೋತ್ತಮರು ೮

ಈವುಪಾಸನೆ ಗೈವರಿಳೆಯೊಳು
ದೇವತೆಗಳಲ್ಲದಲೆ ನರಕ
ಲ್ಲಾವ ಬಗೆಯಿಂದಾದರಿವರರ್ಚನೆಯು ಹರಿಪೂಜೆ
ಕೇವಲ ಪ್ರತಿಮೆಗಳನಿಪರು ರ
ಮಾ ವಿನೋದಗೆ ಇವರನುಗ್ರಹ
ದೇವರಾನುಗ್ರಹ ಪೆಸಿಸುವುದು ಮುಕುತಿಯೋಗ್ಯರಿಗ ೯

ತನುವೆ ನಾನೆಂಬುವನು ಸತಿ ಸುತ
ಮನೆ ಧನಾದಿಗಳನ್ನದೆಂಬನು
ದ್ಯನದಿ ಮೊದಲಾದುದಕಗಳೆ ಸತ್ತೀರ್ಥವೆಂಬುವನು
ಅನಳ ಲೋಹಾದಿ ಪ್ರತೀಕಾ
ರ್ಚನೆಯೆ ದೇವರಪೂಜೆ ಸುಜನರ
ಮನುಜರಹುದೆಂಬುವನು ಗೋಖರನೆನಿಪ ಬುಧರಿಂದ ೧೦

ಅನಲ ಸೋಮಾರ್ಕೇಂದು ತಾರಾ
ವನಿ ಸುರಾಪಗ ಮುಖ್ಯ ತೀರ್ಥಗ
ಳನಿಲ ಗಗನ ಮನಾದಿ ಇಂದ್ರಿಯಗಳಿಗೆ ಅಭಿಮಾನಿ
ಎನಿಪಸುರರು ವಿಪಶ್ಚಿತರು ಸನ್
ಮನದಿ ಭಜಿಸಿದಲಿಪ್ಪವರ ಪಾ
ವನವ ಮಾಡರು ತನ್ನ ಪೂಜೆಯ ಮಾಡಿದರು ಸರಿಯೆ ೧೧

ಕೆಂಡ ಕಾಣದೆ ಮುಟ್ಟಿದರು ಸರಿ
ಕಂಡು ಮುಟ್ಟಲು ದಹಿಸದಿಪ್ಪುದೆ
ಪುಂಡರೀಕ ದಳಾಯತಾಕ್ಷನ ವಿಮಲ ಪದಪದ್ಮ
ಬಂಡುಣಿಗಳಂದನಿಪ ಭಕ್ತರ
ಹಿಂಡು ನೋಡಿದ ಮಾತ್ರದಲಿ ತನು
ದಿಂಡು ಗಡಹಿದನರರ ಪಾವನ ಮಾಳ್ಪರಾಕ್ಷಣದಿ ೧೨

ಈ ನಿಮಿತ್ತ ಪುನಃ ಪುನಸ್ಸು
ಜ್ಞಾನಿಗಳ ಸಹವಾಸಮಾಡ ಕು
ಮಾನವರ ಕೂಡಾಡದಿರು ಲೌಕಿಕಕೆ ಮರುಳಾಗಿ
ಶ್ವಾನತೇಜಾಂಸಗನ ಸರ್ವ
ಸ್ಥಾನದಲಿ ತನ್ನಾಮ ರೂಪವ
ಧೇನಿಸುತ ಸಂಚರಿಸು ಇತರಾಲೋಚನೆಯ ಬಿಟ್ಟು ೧೩

ಈ ನಳಿನ ಜಾಂಡದೊಳು ಸರ್ವ
ಪ್ರಾಣಿಗಳೊಳಿದ್ದನವರತ ವಿ
ಜ್ಞಾನಮಯ ವ್ಯಾಪಾರಗಳ ಮಾಡುವನು ತಿಳಿಸದಲೆ
ಏನು ಕಾಣದೆ ಸಕಲ ಕರ್ಮಗ
ಳಾನೆ ಮಾಡುವೆನೆಂಬ ನರನು ಕು
ಯೋನಿಯೈದುವ ಕರ್ತೃ ಹರಿಯೆಂದವನೆ ಮುಕ್ತನಹ ೧೪

ಕಲಿಮಲಾಪಹಳೆನಿಸುತಿಹ ಜಾಂ
ಜೊಳೆಯೊಳಗೆ ಸಂಚರಿಸಿ ಬದುಕುವ
ಜಲಚರಪ್ರಾಣಿಗಳು ಬಲ್ಲವೆ ತೀರ್ಥಮಹಿಮೆಯನು
ಹಲವು ಬಗೆಯಲಿ ಹರಿಯ ಕರುಣಾ
ಬಲದಿ ಬಲ್ಲವರಾದ ಬ್ರಹ್ಮಾ
ನಿಲವಿಪೇಶಾದ್ಯಮರರರಿಯರನಂತಸಮಲ ಗುಣ ೧೫

ಶ್ರೀಲಕುಮಿ ವಲ್ಲಭನು ಹೃತ್ಕೀ
ಲಾಲಜದೊಳಿದ್ದಖಿಳ ಚೇತನ
ಜಾಲವನು ಮೋಹಿಸುವ ತ್ರಿಗುಣದಿ ಬದ್ಧರನು ಮಾಡಿ
ಸ್ಥೂಲ ಕರ್ಮದಿರತರ ಮಾಡಿ ಸ್ವ
ಲೀಲೆಗಳ ತಿಳಿಸದಲೆ ಭವದಿ ಕು
ಲಾಲ ಚಕ್ರದ ತೆರದಿ ತಿರುಗಿಸುತಿಹನು ತಿಳಿಸದಲೆ ೧೬

ವೇದ ಶಾಸ್ತ್ರ ವಿಚಾರಗೈದು ನಿ
ಷೇಧ ಕರ್ಮವತೊರದು ನಿತ್ಯದಿ
ಸಾಧುಕರ್ಮವ ಮಾಳ್ಪರಿಗೆ ಸ್ವರ್ಗಾದಿ ಸುಖವೀವ
ಐದಿಸುವ ಪಾಪಿಗಳ ನಿರಯವ
ಖೇದ ಮೋದ ಮನುಷ್ಯರಿಗೆ ಮ
ವಾರ್ದಿಗಳಿಗಂಧಂತಮದಿ *ದುಃಖಾದಿಗಳ ಕೊಡುವ ೧೭

ನಿರ್ಗುಣೋಪಾಸಕಗೆ ಗುಣ ಸಂ
ಸರ್ಗ ದೋಷಗಳೀಯದಲೆ ಅಪ
ವರ್ಗದಲಿ ಸುಖವಿತ್ತು ಪಾಲಿಸುವನು ಕೃಪಾಸಾಂದ್ರ
ದುರ್ಗಮನು ಎಂದೆನಿಪ ತ್ರ್ಯರಿ
ದ್ವೈರ್ಗ ತ್ರಿಗುಣಾತೀತ ಸಂತತ
ಸ್ವರ್ಗ ಭೂ ನರಕದಲಿ ಸಂಚಾರವನೆ ಮಾಡಿಸುವ ೧೮

ಮೂವರೊಳಗಿದ್ದರೂ ಸರಿಯೆ ಸುಖ
ನೋವುಗಳು ಸಂಬಂಧವಾಗವು
ಪಾವನಕೆ ಪಾವನ ಪರಾತ್ಪರ ಪೂರ್ಣ ಸುಖವನಧಿ
ಈ ವನರುಹ ಭವಾಂಡದೊಳು ಸ್ವಕ
ಳೇವರ ತದಾಕಾರ ಮಾಡಿಪ
ರಾವರೇಶ ಚರಾಚರಾತ್ಮಕ ಲೋಕಗಳ ಪೊರೆವ ೧೯

*ಮಹ ದುಃಖಾದಿಗಳನುಣಿಪ (ಪಾ)

ಆ ನಿಮಿತ್ತ ನಿರಂತರ ಸ್ವಾ
ಧೀನ ಕರ್ತೃತ್ವವನು ಮರದೇ
ನೇನು ಮಾಡುವುದೆಲ್ಲ ಹರಿಯೊಳಹೊರಗ ನೆಲೆಸಿದ್ದು
ತಾನೆ ಮಾಡುವನೆಂದರಿದು ಮು
ದ್ದಾನೆಯಂದದಿ ಸಂಚರಿಸು ಪವ
ಮಾನವಂದಿತ ನೊಂದರಕ್ಷಣ ಬಿಟ್ಟಗಲ ನಿನ್ನ ೨೦

ಹಲವು ಕರ್ಮವಮಾಡಿ ದೇಹವ
ಬಳಲಿಸಪೆ ದಿನದಿನದಿ ಹೃದಯಾ
ಮಲಸದನದಿ ವಿರಾಜಿಸುವ ಹರಿಮೂರ್ತಿಯನೆ ಭಜಿಸು
ತಿಳಿವುದೀ ಪೂಜಾಪ್ರಕರಣವ
ಫಲಸುಪುಷ್ಪಾಗ್ರೋದಕ ಶ್ರೀ
ತುಲಸಿದಳನರ್ಪಿಸಲು ಒಪ್ಪನು ವಾಸುದೇವ ಸದಾ ೨೧

ಧರಣಿ ನಾರಾಯಣನು ಉದಕದಿ
ತುರಿಯನಾಮಕನಗ್ನಿಯೊಳು ಸಂ
ಕರುಷಣಾಹ್ವಯ ವಾಯುಗಪ್ರದ್ಯುಮ್ನನನಿರುದ್ಧಾ
ಇರುತಿಹನು ಆಕಾಶದೊಳು ವ ೞ
ರೆರಡು ರೂಪವ ಧರಿಸಿ ಭೂತಗ
ಕರೆಸುವನು ತನ್ನಾಮರೂಪದಿ ಪ್ರಜರ ಸಾತ್ತ್ವಿಪ ೨೨

ಘನಗತನು ತಾನಾಗಿ ನಾರಾ
ಯಣನು ತನ್ನಾಮದಲಿ ಕರೆಸುವ
ವನದ ಗರ್ಭೋದಕದಿ ನೆಲೆಸಿಹ ವಾಸುದೇವ ಸದಾ
ಧ್ವನಿಸಿಡಿಲು ಸಂಕರುಷಣನು ಮಿಂ
ಚಿನೊಳು ಶ್ರೀ ಪ್ರದ್ಯುಮ್ನ ವೃಷ್ಟಿಯ
ಹನಿಗಳೊಳಗನಿರುದ್ಧನಿಪ್ಪನು ವರುಷವೆಂದೆನಿಸಿ ೨೩

ಗೃಹ ಕುಟುಂಬ ಧನಾದಿಗಳ ಸ
ನ್ನಹಗಳುಳ್ಳವರಾಗಿ ವಿಹಿತಾ
ವಿಹಿತ ಧರ್ಮ ಸುಕರ್ಮಗಳ ತಿಳಿಯುವಲೆ ನಿತ್ಯದಲಿ
ಅಹರ ಮೈಥುನ ನಿದ್ರೆಗೊಳಗಾ
ಗಿಹರು ಸರ್ವಪ್ರಾಣಿಗಳು ಹೃ
ದ್ಗೃಹ ನಿವಾಸಿಯನರಿಯುವಲೆ ಭವದೊಳಗೆ ತೊಳಲುವರು ೨೪

ಒಡಜ ಸಂಭವ ಖಗಫಣಿಪ ಕೆಂ
ಜೆಡೆಯರಿಂದೊಡಗೂಡಿ ರಾಜಿಸು
ತಡವಿಯೊಳಗಿಪ್ಪನು ಸದಾ ಗೋಜ ದ್ವಿಜನು ಎನಿಸಿ
ಉಡುಪನಿಂದಭಿವೃದ್ಧಿಗಳ ತಾ
ಕೊಡುತ ಪಕ್ಷಿ ಮೃಗಾಹಿಗಳ ಕಾ
ರೊಡಲಕಾವನು ತತ್ತದಾಹ್ವಯನಾಗಿ ಜೀವರನು ೨೫

ಅಪರಿಮಿತ ಸನ್ಮಹಿಮ ನರಹರಿ
ವಿಪಿನದೊಳು ಸಂತೈಸುವನು ಕಾ
ಶ್ಯಪಿಯುಳಿದವನು ಸ್ಥಳಗಳಲಿ ಸರ್ವತ್ರ ಕೇಶವನು
ಖಪತಿ ಗಗನದಿ ಜಲಗಳಲಿ ಮಹ
ಶಫರ ನಾಮಕ ಭಕ್ತರನು ನಿ
ಷ್ಕಪಟದಿಂದಲಿ ಸಲಹುವನು ಕರುಣಾಳು ದಿನದಿನದಿ ೨೬

ಕಾರಣಾಂತರ್ಯಾಮಿ ಸ್ಥೂಲವ
ತಾರವ್ಯಾಪ್ತಾಂಶಾದಿ ರೂಪಕೆ
ಸಾರ ಶುಭ ಪ್ರವಿವಿಕ್ತನಂದಸ್ಥೂಲ ನಿಸ್ಸಾರ
ಆರು ರಸಗಳನರ್ಪಿಸಲ್ಪರಿ
ಗೀ ರಹಸ್ಯವ ಪೇಳದೆ ಸದಾ
ಪಾರಮಹಿಮನ ರೂಪಗುಣಗಳ ನೆನೆದು ಸುಖಿಸುತಿರು ೨೭

ಜಲಗತೋಡುಪನವುಲಬಿಂಬವ
ಮೆಲುವೆಪೆಂಬತಿ ಹರುಷದಿಂದಲಿ
ಜಲಚರಪ್ರಾಣಿಗಳು ನಿತ್ಯದಿ ಯತ್ನಗೈವಂತೆ
ಹಲಧರಾನುಜ ಭೋಗ್ಯ ರಸಗಳ
ನೆಲೆಯ ನರಿಯದೆ ಪೂಜಿಸುತ ಹಂ
ಬಲಿಸುವರು ಪುರುಷಾರ್ಥಗಳ ಸತ್ಕುಲಜರಾವೆಂದು ೭೮

ದೇವ ಋಷಿ ಗಂಧರ್ವ ಪಿತೃ ನರ
ಜೀವ ಮಾನವ ದನುಜಗೋಜ ಖ
ರಾವಿ ಮೊದಲಾದಖಿಳ ಚೇತನ ಭೋಗ್ಯರಸಗಳನು
ಯಾವದನಯನಗಳೊಳಗಿದ್ದು ರ
ಮಾವರನು ಸ್ವೀಕರಿಪ ಯಾವ
ಜ್ಜೀವಗಣಕೆ ಸ್ವಯೋಗ್ಯ ರಸಗಳ ನೀಯನೆಂದೆಂದು ೨೯

ಒರಟು ಬುದ್ಧಿಯ ಬಿಟ್ಟು ಲೌಕಿಕ
ಹರಟೆಗಳ ನೀಡಾಡಿ ಕಾಂಚನ
ಪರಟಿ ಲೋಷ್ಟಾದಿಗಳು ಸಮ ವೆಂದರಿತು ನಿತ್ಯದಲಿ
ಪುರುಟ ಗರ್ಭಾಂಡೋದರನು ಸ
ತ್ಪುರುಟನೆಂದೆನಿಸೆಲ್ಲರೊಳಗಿ
ದ್ದುರುಟು ಕರ್ಮವ ಮಾಳ್ಪನೆಂದಡಿಗಡಿಗೆ ನೆನೆಯುತಿರು ೩೦

ಭೂತಳದಿ ಜನರುಗಳು ಮರ್ಮಕೆ
ಮಾತುಳನಾಡಿದರೆ ಸಹಿಸದೆ
ಘಾತಿಸುವರತಿಕೋಪದಿಂದಲಿ ಎಚ್ಚರಿಪ ತೆರದಿ
ಮಾತುಳಾಂತಕ ಜಾರ ಹೇ ನವ
ನೀತ ಚೋರನೆ ಎನಲು ತನ್ನ ನಿ
ಕೇತನದೊಳಿಟ್ಟವರ ಸಂತೈಸುವನು ಕರುಣಾಳು ೩೧

ಹರಿಕಥಾಮೃತಸಾರವಿದು ಸಂ
ತರು ಸದಾಚಿತ್ತೈಸುವುದು ನಿ
ಷ್ಠುರಿಗಳಿಗೆ ಪಿಶುಣರಿಗಯೋಗ್ಯರಿಗಿದನು ಪೇಳದಲೆ
ನಿರುತ ಸದ್ಭಕ್ತಿಯಲಿ ಭಗವ
ಚ್ಚರಿತೆಗಳ ಕೊಂಡಾಡಿ ಹಿಗ್ಗುವ
*ಪರಮ ಭಗವದ್ದಾಸರಿಗೆ ತಿಳಿಸುವುದು ಈ ರಹಸ್ಯ ೩೨

ಸತ್ಯಸಂಕಲ್ಪನು ಸದಾ ಏ
ನಿತ್ತುದೇ ಪುರುಷಾರ್ಥ ವೆಂದರಿ
ದತ್ಯಧಿಕ ಸಂತೋಷದಲಿ ನೆನೆಯುತ್ತ ಭುಂಜಿಪುದು
ನಿತ್ಯಸುಖ ಸಂಪೂರ್ಣ ಪರಮ ಸು
ಹೃತ್ತಮ ಜಗನ್ನಾಥ ನಿರ್ಮಲ
ಬತ್ತಿಸಿ ಭವಾಂಬುಧಿಯ ಚಿತ್ಸುಖ ವ್ಯಕ್ತಿ ಕೊಡುತಿಪ್ಪ ೩೩

ಅಂತು ಸಂಧಿ ೧೩ಕ್ಕೆ ಪದ್ಯಗಳು ೪೭೨ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

---

*ಪರಮ ಭಾಗವತರಿಗೆ ತಿಳಿಸುವುದೀರಹಸ್ಯವನು (ಪಾ)

# ಸಂಧಿ ೧೪ "ಸರ್ವಜೀವನ ಕಲ್ಪ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಕೃತಿರಮಣ ಪ್ರದ್ಯುಮ್ನ ವಸು ದೇ
ವತೆಗಳೊಳಹಂಕಾರ ತ್ರಯದೊಳು
ಚತುರವಿಂಶತಿ ರೂಪದಿಂದಲಿ ಭೋಜ್ಯನೆನಿಸುವನು
ಹುತವಹಾಕ್ಷಾಂತರ್ಗತ ಜಯಾ
ಪತಿಯು ತಾನೇ ಮೂರಧಿಕ ತ್ರಿಂ
ಶತಿ ಸುರೂಪದಿ ಭೋಕ್ತೃಯೆನಿಸುವ ಭೋಕ್ತೃಗಳೊಳಿದ್ದು ೧

ಆರದಿಕ ಮೂವತ್ತು ರೂಪದಿ
ವಾರಿಜಾಪ್ತನೊಳಿರುತಿಹನು ಮಾ
ಯಾರಮಣ ಶ್ರೀವಾಸುದೇವನು ಕಾಲನಾಮದಲಿ
ಮೂರುವಿಧ ಪಿತೃಗಳೊಳು ವಸುತ್ರಿಪ್ತ
ರಾರಿಯಾದಿತ್ಯಗನಿರುದ್ಧನು
ತೋರಿಕೊಳ್ಳದೆ ಕರ್ತೃ ಕರ್ಮ ಕ್ರಿಯನೆನಿಸಿ ಕೊಂಬ ೨

ಸ್ವವಶ ನಾರಾಯಣನು ತಾಷ
ಣ್ಣವತಿ ನಾಮದಿ ಕರೆಸುತಲಿ ವಸು
ಶಿವ ದಿವಾಕರ ಕರ್ತೃ ಕರ್ಮ ಕ್ರಿಯೆಗಳೊಳಗಿದ್ದು
ನೆವನವಿಲ್ಲದೆ ನಿತ್ಯದಲಿ ತ
ನ್ನವರು ಮಾಡುವ ಸೇವೆ ಕೈಕೊಂ
ಡವರ ಪಿತೃಗಳಿಗೀವನನಂತಾನಂತ ಸುಖಗಳನು ೩

ತಂತು ಪಟದಂದದಲಿ ಲಕುಮಿಾ
ಕಾಂತ ಪಂಚಾತ್ಮಕನೆನಿಸಿ ವಸು
ಂತ ಹರ ರವಿ ಕರ್ತೃಗಳೊಳಿದ್ದನವರತ ತನ್ನ
ಚಿಂತಿಸುವ ಸಂತರನು ಗುರು ಮು
ಧ್ವಾಂತರಾತ್ಮಕ ಸಂತಯಿಸುವನು
ಸಂತತಖಿಳಾರ್ಥಗಳ ಪಾಲಿಸಿ ಇಹ ಪರಂಗಳಲಿ ೪

ತಂದೆತಾಯ್ಗಳ ಪ್ರೀತಿಗೋಸುಗ
ನಿಂದ್ಯ ಕರ್ಮವ ತೊರೆದು ವಿಹಿತಗ
ಳೊಂದು ಮಿಾರದೆ ಸಾಂಗ ಕರ್ಮಗಳಾಚರಿಸುವವರು
ವಂದಸಿಯರಾಗಿಳೆಯೊಳಗೆ ದೈ
ನಂದಿನದಿ ದೈಶಿಕದಹಿಕ ಸುಖ
ದಿಂದ ಬಾಳ್ವರು ಬಹುದಿವಸದಲಿ ಕೀರ್ತಿಯುತರಾಗಿ ೫

ಅಂಶಿ ಅಂಶಾಂತರ್ಗತತ್ರಯ
ಹಂಸವಾಹನ ಮುಖ್ಯ ದಿವಿಜರ
ಸಂಶಯದಿ ತಿಳಿದಂತರಾತ್ಮಕ ಶ್ರೀ ಜನಾರ್ದನನ
ಸಂಸ್ಮರಣೆ ಪೂರ್ವಕದಿ ಷಡಧಿಕ
ತ್ರಿಂಶತಿತ್ರಯ ರೂಪವರಿತು ವಿ
ಪಾಂಸಗನ ಪೂಜಿಸುವರವರೆ ಕೃತಾರ್ಥರೆನಿಸುವರು ೬

ಮೂರುವರೆ ಸಾವಿರದ ಮೇಲರೆ
ನೂರಯಿದು ರೂಪದಿ ಜನಾರ್ದನ
ಸೂರಿಗಳು ಮಾಡುವ ಸಮಾರಾಧನೆಗೆ ವಿಘ್ನಗಳು
ಬಾರದಂತೆ ಬಹುಪ್ರಕಾರ ಖ
ರಾರಿ ಕಾಪಾಡುವನು ಸರ್ವ ಶ
ರೀರಗಳೊಳಿದ್ದವರವರ ಪೆಸರಿಂದ ಕರೆಸುತಲಿ ೭

ಜಯ ಜಯ ಜಯಾಕಾಂತ ದತ್ತಾ
ತ್ರಯ ಕಪಿಲ ಮಹಿದಾಸ ಭಕ್ತ
ಪ್ರಿಯ ಪುರಾತನ ಪುರುಷ ಪೂರ್ಣಾನಂದ ಜ್ಞಾನಘನ
ಹಯವದನ ಹರಿ ಹಂಸಲೋಕ
ತ್ರಯ ವಿಲಕ್ಷಣ ನಿಖಿಳ ಜಗದಾ
ಶ್ರಯ ನಿರಾಮಯ ದಯದಿ ಸಂತೈಸೆಂದು ಪ್ರಾರ್ಥಿಪುವ ೮

ಷಣ್ಣವತಿಯೆಂಬಕ್ಷರೇಡ್ಯನು
ಷಣ್ಣವತಿ ನಾಮದಲಿ ಕರಸುತ
ತನ್ನವರು ಸದ್ಭಕ್ತಿ ಪೂರ್ವಕದಿಂದ ಮಾಡುತಿಹ
ಪುಣ್ಯ ಕರ್ಮವ ಸ್ವೀಕರಿಸಿ ಕಾ
ರುಣ್ಯಸಾಗರ ಸಲಹುವನು ಬ್ರ
ಹ್ಮಣ್ಯದೇವ ಭವಾಬ್ಧಿಪೋತ ಬಹು ಪ್ರಕಾರದಲಿ ೯

ದೇಹಗಳನು ಕೊಡುವವನು ಅವರವ
ರಹರವನು ಕೊಡವಿಹನೆ ಸುಮನಸ
ಮಹಿತ ಮಂಗಳ ಚರಿತ ಸದ್ಗುಣಭರಿತ ನನವರತ
ಐಹಿಕ ಪಾರತ್ರಿಕ ಸುಖಪ್ರದ
ವಹಿಸಿ ಬೆನ್ನಲಿ ಬಿಟ್ಟನಮೃತವ
ದ್ರುಹಿಣ ಮೊದಲಾದವರಿಗುಣಿಸಿದ ಮುರಿದನಹಿತರನು ೧೦

ದ್ರುಹಿಣ ಮೊದಲಾದಮರರಿಗೆ ಸ
ನ್ಮಹಿತ ಮಾಯಾರಮಣ ತಾನೇ
ಸ್ವಹನೆನಿಸಿ ಸಂತೃಪ್ತಿಪಡಿಸುವ ಸರ್ವಕಾಲದಲಿ
ಪ್ರಹಿತ ಸಂಕರುಷಣನು ಪಿತೃಗಳಿ
ಗಹರೆನಿಪನು ಸ್ವಧಾಖ್ಯರೂಪದಿ
ಮಹಿಜಫಲ ತೃಣಪೆಸರಿನಲಿ ಪ್ರದ್ಯುಮ್ನನನಿರುದ್ಧ ೧೧

ಅನ್ನನೆನಿಸುವ ನೃಪಶುಗಳಿಗೆ ಹಿ
ರಣ್ಯಗರ್ಭಾಂಡದೊಳು ಸಂತತ
ತನ್ನನೀಪರಿಯಿಂದುಪಾಸನೆಗೈವ ಭಕುತರಸು
ಬನ್ನ ಬಡಿಸದೆ ಭವಸಮುದ್ರ ಮ
ಹೋನ್ನತಿಯ ದಾಟಿಸಿ ಚತುರ್ವಿಧ
ದನ್ನಮಯನಾತ್ಮಪ್ರದರ್ಶನ ಸುಖವ ನೀವಹರಿ ೧೨

ಮನವಚನ ಕಾಯಗಳ ದೆಸೆಯಿಂ
ದನುದಿನದಿ ಬಿಡದಾಚರಿಸುತಿ
ಪ್ಪನುಚಿತೋಚಿತ ಕರ್ಮಗಳ ಸದ್ಭಕ್ತಿ ಪೂರ್ವಕದಿ
ಅನಿಲ ದೇವನೊಳಿಪ್ಪ ನಾರಾ
ಯಣಗಿದನ್ನವುಯೆಂದು ಕೃಷ್ಣಾ
ರ್ಪಣವೆನುತ ಕೊಡೆ ಸ್ವೀಕರಿಸಿ ಸಂತೈಪ ಕರುಣಾಳು ೧೩

ಏಳು ವಿಧದನ್ನ ಪ್ರಕರಣವ
ಕೇಳಿಕೋವಿದರಾಸ್ಯದಿಂದಲಿ
ಆಲಸವ ಮಾಡದಲೆ ಅನಿರುದ್ಧಾದಿ ರೂಪಗಳ
ಕಾಲ ಕಾಲದಿ ನೆನೆದು ಪೂಜಿಸು
ಸ್ಥೂಲವ-ತಿಗಳಿಗಿದನು ಪೇಳದೆ
ಶ್ರೀ ಲಕುಮಿವಲ್ಲಭನೆ ಅನ್ನಾದನ್ನವನ್ನದನು ೧೪

ಎಂದರಿತು ಸಪ್ತಾನ್ನಗಳ ದೈ
ನಂದಿನದಿ ಮರಯದೆ ಸದಾ ಗೋ
ವಿಂದಗರ್ಪಿಸು ನಿರ್ಭಯದಿ ಮಹಯಜ್ಞವಿದುಯೆಂದು
ಇಂದಿರೇಶನು ಸ್ವೀಕರಿಸಿ ದಯ
ದಿಂದ ಬೆಂಡಿಸಿಕೊಳದೆ ತವಕದಿ
ತಂದುಕೊಡುವನು ಪರಮ ಮಂಗಳ ತನ್ನ ದಾಸರಿಗೆ ೧೫

ಸೋಜಿಕರದಲಿ ಪಿಡಿದು ಸಮರವ
ನಾಜಯಿಸುವೆನು ಎಂಬ ನರನಂ
ತೀ ಜಗತ್ತಿನೊಳುಳ್ಳ ಅಜ್ಞಾನಿಗಳು ನಿತ್ಯದಲಿ
ಶ್ರೀಜಗತ್ಪತಿ ಚರಣಯುಗಳ ಸ
ರೋಜ ಭಕ್ತಿಜ್ಞಾನ ಪೂರ್ವಕ
ಪೂಜಿಸದೆ ಧರ್ಮಾರ್ಥಕಾಮವ ಬಯಸಿ ಬಳಲುವರು ೧೬

ಶಕಟ ಭಂಜನ ಸಕಲ ಜೀವರ
ನಿಕಟಗನು ತಾನಾಗಿ ಲೋಕಕ
ಪ್ರಕಟನಾಗದೆ ಸಕಲ ಕರ್ಮವ ಮಾಡಿ ಮಾಡಿಸುತ
ಅಕುಟಿಲಾತ್ಮಕ ಭಕುತ ಜನರಿಗೆ
ಸುಖದನೆನಿಸುವ ಸರ್ವಕಾಲದ
ಲಕಟಕಟ ಈತನ ಮಹಾಮಹಿಮೆಗಳಿಗೇನೆಂಬ ೧೭

ಶ್ರೀಲಕುಮಿ ವಲ್ಲಭನು ವೈಕುಂ
ಠಾಲಯದಿ ಪ್ರಣವ ಪ್ರಕೃತಿ ಕೀ
ಲಾಲಜಾಸನ ಮುಖ್ಯ ಚೇತನರೊಳಗೆ ನೆಲೆಸಿದ್ದು
ಮೂಲಕಾರಣನಂತ ನಾಮದಿ
ಲೀಲೆ ಗೈಸುತ ತೋರಿಕೊಳ್ಳದೆ
ಪಾಲಿನೊಳು ಘೃತವಿದ್ದ ತೆರದಂತಿಪ್ಪ ತ್ರಿಸ್ಥಳದಿ ೧೮

ಮೂರುಯುಗದಲಿ ಮೂಲರೂಪನು
ಸೂರಿಗಳ ಸಂತೈಸಿ ದಿತಿಯ ಕು
ಮಾರಕರ ಸಂಹರಿಸಿ ಧರ್ಮವನುಳುಹ ಬೇಕೆಂದು
ಕಾರುಣಿಕ ಭೂಮಿಯೊಳು ನಿಜಪರಿ
ವಾರ ಸಹಿತವತರಿಸಿ ಬಹುವಿಧ
ತೋರಿದನು ನರವತ್ಪ್ರವರ್ತಿಯ ಸಕಲ ಚೇತನಕೆ ೧೯

ಕಾರುಣಾಹ್ವಯ ಪ್ರಕೃತಿಯೊಳಗಿ
ದ್ವಾರಧಿಕ ಹದಿನೆಂಟು ತತ್ವವ
ತಾ ರಚಿಸಿ ತದ್ರೂಪ ತನ್ನಾಮಂಗಳನೆ ಧರಿಸಿ
ನೀರಜಭವಾಂಡವನು ನಿರ್ಮಿಸಿ
ಕಾರುಣಿಕ ಕಾರ್ಯಾಖ್ಯ ರೂಪದಿ
ತೋರುವನು ಸಹಜಾಹಿತಾಚಲಗಳಲಿ ಪ್ರತಿದಿನದಿ ೨೦

ಜೀವರಂತರ್ಯಾಮಿ ಯಂಶಿಕ
ಕೇವಲಗಳೊಳಗಿಂದ್ರಿಯಗಳಲಿ
ತಾ ವಿಹಾರವ ಗೈಯುತನುದಿನವಂಶನಾಮದಲಿ
ಈ ವಿಷಯಗಳನುಂಡು ಸುಖಮಯ
ಈವ ಸುಖ ಸಂಸಾರದುಃಖವ
ದೇವಮಾನವ ದಾನವರಿಗನಿರತ ಸುದಾಮಸಖ ೨೧

ದೇಶದೇಶವನುತ್ತಿ ದೇಹಾ
ಯಾಸಗೊಳಿಸದೆ ಕಾಮ್ಯ ಕರ್ಮದು
ರಾನೆಗೊಳಗಾಗದಲೆ ಬ್ರಹ್ಮಾದ್ಯಖಿಳಚೇತನರು
ಭೂಸಲಿಲ ಪಾವಕ ಸಮೀರಾ
ಕಾಶ ಮೊದಲಾದಖಿಳ ತತ್ವ ಪ
ರೇಶಗಿವಧಿಷ್ಠಾನ ವೆಂದರಿದರ್ಚಿಸನವರತ ೨೨

ಎರಡು ವಿಧದಲಿ ಲೋಕದೊಳು ಜೀ
ವರುಗಳಿಪ್ಪರು ಸಂತತಕ್ಷರ
ಕ್ಷರ ವಿಲಿಂಗ ಸಲಿಂಗ ಸ್ವಚ್ಛಾಸ್ವಚ್ಛ ಭೇದದಲಿ
ಕರೆಸುವುದು ಜಡಪ್ರಕೃತಿ ಪ್ರಣವಾ
ಕ್ಷರ ಮಹತ್ತ್ವಣುಕಾಲ ನಾಮದಿ
ಹರಿಸಹಿತ ಭೇದಗಳ ಪಂಚಕ ಸ್ಮರಿಸು ಸರ್ವತ್ರ ೨೩

ಜೀವ ಜೀವರ ಭೇದ ಜಡ ಜಡ
ಜೀವ ಜಡಗಳ ಭೇದ ಪರಮನು
ಜೀವ ಜಡ ಸುವಿಲಕ್ಷಣನು ಎಂದರಿದು ನಿತ್ಯವಲಿ
ಈ ವಿರಿಂಚಾಂಡದೊಳು ಎಲ್ಲಾ
ರಾವಿನಲಿ ತಿಳಿದೈದು ಭೇದ ಕ
ಳೇವರದೊಳರಿತಚ್ಯುತನ ಪದವೈದು ಶೀಘ್ರದಲಿ ೨೪

ಆದಿಯಲ್ಲಿ ಕ್ಷರಾಕ್ಷರಾಖ್ಯ
ದ್ವೇದವಕ್ಷರದೊಳು ರಮಾ ಮಧು
ಸೂದನರು ಕ್ಷರಗಳೊಳು ಪ್ರಕೃತಿ ಪ್ರಣವ ಕಾಲಗಳು
ವೇಧಮುಖ್ಯ ತೃಣಾಂತ ಜೀವರ
ಭೇದಗಳನರಿತೀರಹಸ್ಯವ
ಬೋಧಿಸದೆ ಮಂದರಿಗೆ ಸರ್ವತ್ರವಲಿ ಚಿಂತಿಪುದು ೨೫

ದೀಪದಿಂದೀಪಗಳು ಪೊರವು
ವ್ಯಾಪಣಾಲಯ ಗತ ತಿಮಿರಗಳ
ತಾ ಪರಿಹರವ ಗೈಸಿ ತದ್ಗ ಪದಾರ್ಥ ತೋರ್ಪಂತೆ
ಸೌಪರಣಿ ವರವಹನ ತಾ ಬಹು
ರೂಪ ನಾಮದಲೆಲ್ಲ ಕಡೆಯಲಿ
ವ್ಯಾಪಿಸಿದ್ದು ಯಥೇಷ್ಟ ಮಹಿಮೆಯ ತೋರ್ಪ ತಿಳಿಸವಲೆ ೨೬

ನಳಿನ ಮಿತ್ರಗೆ ಇಂದ್ರಧನು ಪ್ರತಿ
ಫಲಿಸುವಂತೆ ಜಗತ್ರಯವು ಕಂ
ಗೊಳಿಪುದನುಪಾಧಿಯಲಿ ಪ್ರತಿಬಿಂಬಾಹ್ವಯದಿ ಹರಿಗೆ
ತಿಳಿಯೆ ತ್ರಿಕಕುದ್ಧಾಮನತಿ ಮಂ
ಗಳ ಸುರೂಪವ ಸರ್ವಠಾವಿಲಿ
ಪೊಳೆವ ಹೃದಯಕೆ ಪ್ರತಿದಿವಸ ಪ್ರಹ್ಲಾದ ಪೋಷಕನು ೨೭

ರಸ ವಿಶೇಷದೊಳತಿ ವಿಮಲ ಸಿತ
ವಸನವನು ತೋಯ್ಸಗ್ನಿಯೊಳಗಿಡೆ
ಪಸರಿಸುವುದು ಪ್ರಕಾಶನಸುಗುಂದವಲೆ ಸರ್ವತ್ರ
ತ್ರಿಶಿರದೂಷಣ ವೈರಿ ಭಕ್ತಿ ಸು
ರಸದಿತೋಯ್ದ ಮಹಾತ್ಮರನ ಬಾ
ಧಿಸವು ಭವದೊಳಗಿದ್ದರಯು ಸರಿ ದುರಿತರಾಶಿಗಳು ೨೮

ವಾರಿನಿಧಿಯೊಳಗಖಿಳ ನದಿಗಳು
ಬೇರೆ ಬೇರೆ ನಿರಂತರವಲಿ ವಿ
ಹಾರಗೈಯುತ ಪರಮ ಮೋದದಲಿಪ್ಪ ತೆರನಂತೆ
ಮೂರು ಗುಣಗಳ ಮಾನಿಯೆನಿಸುವ
ಶ್ರೀರಮಾ ರೂಪಗಳು ಹರಿಯೊಳು
ತೋರುತಿಪ್ಪವು ಸರ್ವಕಾಲದಿ ಸಮರಹಿತನೆನಿಸಿ ೨೯

ಕೋಕನದ ಸಖನುದಯ ಘೂಕಾ
ಲೋಕನಕೆ ಸೊಗಸದಿರೆ ಭಾಸ್ಕರ
ತಾ ಕಳಂಕನೆ ಈ ಕೃತೀಪತಿ ಜಗನ್ನಾಥಸಿರೆ
ಸ್ವೀಕರಿಸಿ ಸುಖಬಡಲರಿಯದವಿ
ವೇಕಿಗಳು ನಿಂದಿಸಿದರೇನಹು
ದೀ ಕವಿತ್ವವ ಕೇಳಿ ಮೋದಿಸದಿಹರೆ ಕೋವಿದರು ೩೦

ಚೇತನಾಚೇತನಗಳಲಿ ಗುರು
ಮಾತರಿಶ್ವಾಂತರ್ಗತ ಜಗ
ನ್ನಾಥ ವಿಠಲ ನಿರಂತರದಿ ವ್ಯಾಪಿಸಿ ತಿಳಿಸಿಕೊಳದೆ
ಕಾತರವ ಪುಟ್ಟಿಸಿ ವಿಷಯದಲಿ
ಯಾತುಧಾನರ ಮೋಹಿಸುವ ನಿ
ರ್ಭೀತ ನಿತ್ಯಾನಂದಮಯ ನಿರ್ದೋಷ ನಿರವದ್ಯ ೩೧

ಅಂತು ಸಂಧಿ ೧೭ಕ್ಕೆ ಪದ್ಯಗಳು ೪೪೩ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

## ಸಂಧಿ ೧೩ "ಶ್ವಾಸ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಭಾರತೀಶನು ಘಳಿಗೆಯೊಳು ಮೂ
ನ್ನೂರು ಅರುವತ್ತುಸುರು ಜಪಗಳ
ತಾರಚಿಸುವನು ಸರ್ವಜೀವರೊಳಿದ್ದು ಬೇಸರದೆ
ಕಾರುಣಿಕ ನವರವರ ಸಾಧನ
ಪೂರಯಿಸಿ ಭೂನರಕ ಸ್ವರ್ಗವ
ಸೇರಿಸುವ ಸರ್ವಜ್ಞ ಸಕಲೇಷ್ಟಪ್ರದಾಯಕನು ೧

ತಾಸಿಗೊಂಭೈನೂರು ಶ್ವಾಸೋ
ಚ್ಛ್ವಾಸಗಳ ನಡೆಸುತಲಿ ಚೇತನ
ರಾತ್ರಿಯೊಳು ಹಗಲಿರುಳು ಜಾಗ್ರತನಾಗಿ ನಿತ್ಯದಲಿ
ಈ ಸುಮನಸೋತ್ತಂಸ ಲೇಶಾ
ಯಾಸವಿಲ್ಲದೆ ಪೋಷಿಸುತ ಮೂ
ಲೇಶನಂಘ್ರಿ ಸರೋಜ ಮೂಲದಲಿಪ್ಪ ಕಾಣಿಸದೆ ೨

ಅರಿವುದೊಂದ್ಯಾಮದೊಳು ಶ್ವಾಸಗ
ಳೆರಡು ಸಾವಿರದೇಳು ನೂರನು
ಶರ ಸಹಸ್ರದಮೇಲೆ ನಾನ್ನೂರಹವು ದ್ವಿತಿಯಕ್ಕೆ
ಮರಳಿಯಾಮತ್ರಯಕೆ ವಸು ಸಾ
ವಿರದ ಮೇಲ್ನೂರಣಿಕೆ ಹ
ನ್ನೆರಡು ತಾಸಿಗೆ ಹತ್ತುಸಾವಿರದೆಂಟುನೂರಹವು ೩

ಒಂದುದಿನದೊಳಗನಿಳ ನಿಪ್ಪ
ತ್ತೊಂದುಸಾವಿರದಾರುನೂರು ಮು
ಕುಂದನಾಜ್ಞದಿ ಮಾಡಿ ಮಾಡಿಸಿ ಲೋಕಗಳ ಪೊರವ
ಎಂದು ಪವನನ ಪೊಗಳುತಿರು ಎಂ
ದೆಂದು ಮರೆಯದಲೀ ಮಹಿಮೆ ಸಂ
ಕ್ರಂದನಾದ್ಯರಿಗುಂಟೆ ನೋಡಲು ಸರ್ವಕಾಲದಲಿ ೪

ಮೂರುಲಕ್ಷದಮೇಲೆ ವಿಂಶತಿ
ಈರರಡು ಸಾವಿರವು ಪಕ್ಷಕೆ
ಆರು ಲಕ್ಷದಮೇಲೆ ನಾಲ್ವತ್ತೆಂಟುಸಾವಿರವು
ಮಾರುತನು ಮಾಸಕೆ ಜಪಿಸಿ ಸಂ
ಸಾರಸಾಗರದಿಂದ ಸುಜನರ
ಪಾರುಗಾಣಿಸಿ ಸಲಹುವನು ಬಹುಭೋಗಗಳನಿತ್ತು ೫

ಎರಡು ತಿಂಗಳಿಗಹವು ಋತು ಭೂ
ಸುರರು ತಿಳಿವುದು ಶ್ವಾಸಜಪ ಹ
ನ್ನೆರಡು ಲಕ್ಷದವೇಲೆ ತೊಂಭತ್ತಾರು ಸಾಹಸ್ರ
ಕರೆಸುವುದು ಆಯನಾಹ್ವಯದಲರೆ
ವರುಷ ಮೂವತ್ತೆಂಟು ಲಕ್ಷೋ
ಪರಿ ತಿಳಿವುದೆಂಭತ್ತು ಎಂಟು ಸಹಸ್ರಕೋವಿದರು ೬

ವರುಷಕಿದರಿಮ್ಮಡಿ ಜಪಂಗಳ
ಗುರುವರಿಯ ತಾಮಾಡಿ ಮಾಡಿಸಿ
ದುರಿತಗಳ ಪರಿಹರಿಸುವನು ಚಿಂತಿಸಿದ ಸಜ್ಜನರ
ಸುರವಿರೋಧಿಗಳೊಳಗೆ ನೆಲೆಸಿ
ದ್ವರವಿದೂರ ತಮೋಧಿಕಾರಿಗ
ಳಿರವರಿತು ಸೋಹಮ್ಮುಪಾಸನೆ ಮಾಳ್ಪನವರಂತೆ ೭

ಇನಿತುಪಾಸನೆ ಸರ್ವಜೀವರೊ
ಳನಿಳದೇವನು ಮಾಡುತಿರೆ ಚಿಂ
ತನೆಯಮಾಡದೆ ಕಂಡನೀರೊಳು ಮುಳುಗಿ ನಿತ್ಯದಲಿ
ಮನೆಯೊಳಗೆ ಕೃಷ್ಣಾಜಿನಾದ್ಯಾ
ಸನದಿ ಕುಳಿತು ವಿಶಿಷ್ಟ ಬಹು
ಸಜ್ಜನನೆನಿಸಿ ಜಪಮಣಿಗಳಣಿಸಿದರೇನು ಬೇಸರದೆ ೮

ಓದನೋದಕವೆರಡು ತೇಜದೊ
ಳ್ಮೃದುವು ಲಯುತದಭಿಮಾನಿಗ
ಳಾದ ಶಿವಪವನರು ರಮಾಧೀನತ್ವವೈದುವರು
ಈ ದಿವಿಜರೊಡಗೂಡಿ ಶ್ರೀ ಮಧು
ಸೂದನನನ್ನೈದುವಳು ಎಂದರಿ
ದಾದರದ ಉನ್ನೋದಕವ ಕೊಂಡುಣುತಸುಖಿಸುತಿರು ೯

ಜಾಲಿತೊಪ್ಪಲಜಾವಿಗಳು ಮೆ
ದ್ದಾಲಯದಿ ಸ್ವೇಚ್ಛಾನುಸಾರದಿ
ಪಾಲಗರೆವಂದದಲಿ ಲಕುಮಿರಮಣ ತನ್ನವರ
ಕೇಳು ಕರ್ಮವ ಸ್ವೀಕರಿಸಿ ತ
ನ್ನಾಲಯದೊಳಿಟ್ಟವರ ಪೊರೆವ ಕೃ
ಪಾಳು ಕಾಮದ ಕೈರವದಳಶ್ಯಾಮ ಶ್ರೀರಾಮ ೧೦

ಶಶಿದಿವಾಕರ ಪಾವಕರೊಳಿರು
ವಸಿತಸಿತ ಲೋಹಿತಗಳಲಿ ಶಿವ
ಶ್ವಸನ ಭಾರ್ಗವಿ ಮೂವರೊಳು ಶ್ರೀಕೃಷ್ಣ ಹಯವದನ
ವಸುಧಿಪಾರ್ದನ ತ್ರಿವೃತುಯೆನಿಸೀ.
ವಸುಮತಿಯೊಳನ್ನೋದಕಾನಳ
ಪೆಸರಿನಿಂದಲಿ ಸರ್ವಜೀವರ ಸಲಹುವನು ಕರುಣಿ ೧೧

ದೀಪಕರದಲಿ ಪಿಡಿದು ಕಾಣದೆ
ಕೂಪದಲಿ ಬಿದ್ದಂತೆ ವೇದ ಮ
ಹೋಪನಿಷದರ್ಥಗಳ ನಿತ್ಯದಿ ಪೇಳುವವರೆಲ್ಲ
ಶ್ರೀ ಪವನ ಮುಖವಿನುತನಮಲ ಸು
ರೂಪಗಳ ವ್ಯಾಪಾರ ತಿಳಿಯದೆ
ಪಾಪಪುಣ್ಯಕೆ ಜೀವಕರ್ತೃವಕರ್ತೃಹರಿಯೆಂದು ೧೨

ಅನಿಳದೇವನು ವಾಙ್ಮನೋಮಯ
ನೆನಿಸಿ ಪಾವಕ ವರುಣಸಂಕ್ರಂ
ದನ ಮುಖಾದ್ಯರೊಳಿದ್ದ ಭಗವದ್ರೂಪ ಗುಣಗಳನು
ನೆನೆನೆನೆದು ಉಚ್ಚರಿಸುತಲಿ ನ
ಮ್ಮನು ಸದಾ ಸಂತೈಸುವನು ಸ
ನ್ಮುನಿಗಣಾರಾಧಿತ ಪದಾಂಬ ಜಗೋಜ ಸುರರಾಜ ೧೩

ವಾದವೆನಿಸವು ವಾಙ್ಮನೋಮಯ
ಪಾದ ರೂಪದ್ವಯಗಳೊಳು ಪ್ರ
ಹ್ಲಾದಪೋಷಕ ಸಂಕರುಷಣಾಹ್ವಯದಿ ನೆಲೆಸಿದ್ದು
ವೇದಶಾಸ್ತ್ರ ಪುರಾಣಗಳ ಸಂ
ವಾದ ರೂಪದಿ ಮನನ ಗೈಯುತ
ಮೋದಮಯ ಸುಖವಿತ್ತು ಸಲಹುವ ಸರ್ವ ಸಜ್ಜನರ ೧೪

ಗಂಧವಹ ದಶದಿಶಗಳೊಳಗರ
ವಿಂದ ಸೌರಭ ಪಸರಿಸುತ ಘ್ರಾ
ಣೇಂದ್ರಿಯಗಳಿಗೆ ಸುಖವನೀವುತ ಸಂಚರಿಸುವಂತೆ
ಇಂದಿರೇಶನ ಸುಗುಣಗಳ ದೈ
ನಂದಿನದಿ ತುತಿಸುತನುಮೋದಿಸು
ತಂಧಬಧಿರ ಸುಮೂಕನಂತಿರು ಮಂದ ಜನರೊಡನೆ ೧೫

ಶ್ರೀರಮಣನರಮನೆಯ ಪೂರ್ವ
ದ್ವಾರದಲ್ಲಿಹ ಸಂಜ್ಞ ಸೂರ್ಯಗ
ಭಾರತೀಪತಿ ಪ್ರಾಣನೊಳಗಿಹ ಲಕುಮಿ ನರೆಯಣನ
ಸೇರಿ ಮನುಜೋತ್ತಮರು ಸರ್ವಶ
ರೀರಗತ ನಾರಾಯಣನ ಅವ
ತಾರ ಗುಣಗಳ ತುತಿಸುತಲಿ ಮೋದಿಪರು ಮುಕ್ತಿಯಲಿ ೧೬

ಪ್ರಣವ ಪ್ರತಿಪಾದ್ಯನ ಪುರದ ದ
ಕ್ಷಿಣ ಕವಾಟದಲಿಪ್ಪ ಶಶಿರೋ
ಹಿಣಿಗತವ್ಯಾನಸ್ಥ ಕೃತಿ ಪ್ರದ್ಯುಮ್ನ ರೂಪವನು
ಗುಣಗಳನು ಸಂತುತಿಸುತಲಿ ಪಿತೃ
ಗಣ ಗದಾಧರನತಿ ವಿಮಲ ಪ
ಟ್ಟಣದೊಳಗ ಸ್ವೇಚ್ಛಾನುಸಾರದಿ ಸಂಚರಿಸುತಿಹರು ೧೭

ಅಮಿತ ವಿಕ್ರಮನಾಲಯದ ಪ
ಶ್ಚಿಮ ಕವಾಟದಿ ಸತಿಸಹಿತ ಸಂ
ಭ್ರಮದಿ ಭಗವದ್ಗುಣಗಳನ ಪೊಗಳುತಲಿ ಮೋದಿಸುವ
ಸುಮನಸಾಸ್ಯನೊಳಿಪ್ಪಪಾನಗ
ದಮನಸಂಕರುಷಣನ ನಿಜ ಹೃ
ತ್ಕಮಲದೊಳು ಧೇನಿಸುವ ಋಷಿಗಣವೈದಿ ಸುಖಿಸುವರು ೧೮

ಸ್ವರಮಣನ ಗುಣರೂಪ ಸಪ್ತ
ಸ್ವರಗಳಿಂದಲಿ ಪಾಡುತಿಹ ತುಂ
ಬುರನೆ ಮೊದಲಾದಖಿಳ ಗಂಧರ್ವರು ರಮಾಪತಿಯ
ಪುರದ ಉತ್ತರ ಬಾಗಿಲಾಧಿಪ
ಸುರಪ ಶಚಿಗಸಮಾನ ವಾಯುಗ
ಹರಿವಣೀನಿಭ ಶಾಂತಿಪತಿ ಅನಿರುದ್ಧನೈದುವರು ೧೯

ಗರುಡ ಶೇಷಮರೇಂದ್ರ ಮುಖ ಪು
ಷ್ಕರನೆ ಕಡೆಯಾಗಿಪ್ಪಖಿಳನಿ
ರ್ಜರರು ಊರ್ಧ್ವದ್ವಾರಗತ ಭಾರತಿಉದಾನನೊಳು
ಮೆರವ ಮಾಯಾವಾಸುದೇವನ
ಪರಮ ಮಂಗಳವಿಷಯಗಳ ಮಂ
ದಿರವನೈದಿ ಸದಾಮುಕುಂದನ ನೋಡಿ ಸುಖಿಸುವರು ೨೦

ದ್ವಾರಪಂಚಕ ಪಾಲಕರೊಳಿಹ
ಭಾರತೀ ಪ್ರಾಣಾಂತರಾತ್ಮಕ
ಮಾರಮಣನೈ ರೂಪತತ್ತ್ವದ್ವಾರದಲಿ ಬಪ್ಪ
ಮೂರೆರಡುವಿಧ ಮುಕ್ತಿಯೋಗ್ಯರ
ತಾರತಮ್ಯವನರಿತವರ ಕಂ
ಸಾರಿ ಸಂಸಾರಾಬ್ಧಿದಾಟಿಸಿ ಮುಕ್ತರನುಮಾಳ್ಪ ೨೧

ಬೆಳಗಿದ್ದೊಜೆಯು ನೋಳ್ಪರಿಗೆ ಥಳ
ಥಳಿಸುತಲಿ ಕಂಗೊಳಿಸುವಂದದಿ
ತೊಳೆದು ದೇಹವನಾಮಮುದ್ರೆಗಳಿಂದಲಂಕರಿಸಿ
ಒಲಿಸಿ ನಿತ್ಯಕುತರ್ಕ ಯುಕ್ತಿಗ
ಳಲವ ಬೋಧರ ಶಾಸ್ತ್ರಮರ್ಮವ
ತಿಳಿಯದಿಹನರ ಬರಿದೆ ಇದರೊಳು ಶಂಕಿಸಿದರೇನು ೨೨

ಉದಧಿಯೊಳಗೂರ್ಮಿಗಳು ತೋರ್ಪಂ
ದದಲಿ ಹಂಸೋದ್ಗೀಥ ಹರಿಹಯ
ವದನ ಕೃಷ್ಣಾದ್ಯಮಿತನವತಾರಗಳು ನಿತ್ಯದಲಿ
ಪದುಮನಾಭನೊಳಿರುತಿಹವು ಸ
ರ್ವದ ಸಮಸ್ತಪ್ರಾಣಿಗಳ ಹೃ
ದ್ಧೃದಯಗತರೂಪಗಳು ಅವ್ಯವಧಾನದಲಿ ಬಿಡದೆ ೨೩

ಶರಧಿಯೊಳುಮಕರಾದಿ ಜೀವರು
ಇರುಳು ಹಗಲೇಕ ಪ್ರಕಾರದಿ
ಚರಿಸುತನುವೊಂದಿಸುತಲಿಪ್ಪಂದದಿ ಜಗತ್ರಯವು
ಇರುತಿಹವು ಜಗದೀಶನುದರದಿ
ಕರಸುವುದು ಪ್ರತಿಬಿಂಬ ನಾಮದಿ
ಧರಿಸಿಹುದು ಹರಿನಾಮರೂಪಂಗಳನು ಅನವರತ ೨೪

ದ್ಯುನದಿಯಾದ್ಯಂತವನು ಕಾಣವೆ
ಮನುಜನೇಕತ್ರದಲಿ ತಾ ಮು
ಜ್ಜನವಗೈಯೆ ಸಮಸ್ತ ದೋಷದಿ ಮುಕ್ತನಹತೆರದಿ
ಅನಘನಮಲಾನಂತನಂತ ಸು
ಗುಣಗಳೊಳಗೊಂದೇ ಗುಣೋಪಾ
ಸನವಗೈವ ಮಹಾತ್ಮ ಧನ್ಯ ಕೃತಾರ್ಥನೆನಿಸುವನು ೨೫

ಆಸೆಗೋಳಗಾದವನು ಜನರಿಗ
ದಾಸನೆನಿಸುವನಾಸೆಯನು ಸಿಜ
ದಾಸಿಗೈದಿಹ ಪುಂಸಗೆಲ್ಲರು ದಾಸರೆನಿಸುವರು
ಶ್ರೀಶನಂಘ್ರಿ ಸರೋಜಯುಗಳ ನಿ
ರಾಶೆಯಿಂದಲಿ ಭಜಿಸಲೊಲಿದು ರ
ಮಾಸಹಿತ ತನ್ನನೆ ಕೊಡುವ ಕರುಣಾಸಮುದ್ರ ಹರಿ ೨೬

ಜನನಿ ಸುಷ್ಟುಪದಾರ್ಥಗಳ ಭೋ
ಜನವ ಮಾಡಲು ಗರ್ಭಗತ ಶಿಶು
ದಿನದಿನದಲಭಿವೃದ್ಧಿಯೈದುವ ತೆರದಿ ಜೀವರಿಗೆ
ವನಜನಾಭನು ಸರ್ವರಸ ವುಂ
ಡುಣಿಸಿ ಸಂರಕ್ಷಿಸುವ ಜಾಹ್ನವಿ
ಜನಕ ಜನ್ಮಾದ್ಯಖಿಳ ದೋಷವಿದೂರ ಗಂಭೀರ ೨೭

ವಾಸುದೇವನು ಕರೆಸುವನು ಕಾ
ರ್ಪಾಸನಾಮದಿ ಸಂಕರುಷಣನು
ನಾಸವಾಗಿಹ ತೂಲದೊಳು ತಂತುಗನುಪ್ರದ್ಯುಮ್ನ
ವಾಸರೂಪನಿರುದ್ಧ ದೇವನು
ಭೂಷಣನು ತಾನಾಗಿ ತೋರ್ಪಪ
ರಂಶನಾರಾಯಣನು ಸರ್ವದಮಾನ್ಯ ಮಾಧವನು ೨೮

ಲಲನೆಯಿಂದೊಡಗೂಡಿ ಚೈಲಗ
ಳೊಳಗೆ ಓತಪ್ರೋತ ರೂಪದಿ
ನೆಲೆಸಿಹನು ಚತುರಾತ್ಮಕ ಜಗನ್ನಾಥ ವಿಠ್ಠಲನು
ಚಳಿಬಿಸಿಲುಮಳೆ ಗಾಳಿಯಿಂದರೆ
ಘಳಿಗೆ ಬಿಡದಲೆ ಕಾವನೆಂದರಿ
ದಿಳೆಯೊಳರ್ಚಿಸುತಿರು ಸದಾ ಸರ್ವಾಂತರಾತ್ಮಕನ ೨೯

ಅಂತು ಸಂಧಿ ೧೫ಕ್ಕೆ ಪದ ೪೭೨ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

---

## ಸಂಧಿ ೧೬ "ದತ್ತ ಸ್ವಾತಂತ್ರ್ಯ ಸಂಧಿ"

ಹರಿಃ ಓಂ

**ಹರಿಕಥಾಮೃತಸಾರ ಗುರುಗಳ**
**ಕರುಣದಿಂದಾಪನಿತು ಪೇಳುವೆ**
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಸ್ವಗತ ಸ್ವಾತಂತ್ರ್ಯ ಗುಣವ ಹರಿ
ತೆಗೆದು ಬ್ರಹ್ಮಾದ್ಯರಿಗೆ ಕೊಟ್ಟುದ
ಭೃಗುಮುನಿಪ ಪೇಳಿದನು ಇಂದ್ರದ್ಯುಮ್ನ ಕ್ಷಿತಿಪನಿಗೆ
(ಸಂಧಿ ಸೂಚನೆ)

ಪರಮವಿಷ್ಣು ಸ್ವತಂತ್ರ ಮಾಯಾ
ತರುಣಿ ವಕ್ಷಸ್ಥಳ ನಿವಾಸಿಯು
ಸರಸಿಜೋದ್ಭವ ಪವನರೀರ್ವರು ಸಚಿವರೆನಿಸುವರು
ಸರುವ ಕರ್ಮಗಳಲ್ಲಿ ತತ್ಕ್ರಿಯ
ಉರಗ ಭೂಷಣಹಂಕೃತಿತ್ರಯ
ಕರೆಸುವರು ಸುರೇಂದ್ರಾರ್ಕ ಮುಖರಿಂದ್ರಿಯಪರೆನಿಸುವರು ೧

ಈ ದಿವೌಕಸರಂತೆ ಕಲಿ ಮೊದ
ಲಾದ ದೈತ್ಯರು ಸರ್ವದೇಹದಿ
ತೋದಕರು ತಾವಾಗಿ ವ್ಯಾಪಾರಗಳ ಮಾಡುವರು
ವೇಧನಂದದಿ ಕಲಿಯುಹಂಕಾ
ರಾಧಿಪಾಧಮ ಮಧುಕೈಟಭ
ಕ್ರೋಧಿ ಶಂಬರಮುಖರು ಮನಸಿಗೆ ಸ್ವಾಮಿ ಯೆನಿಸುವರು ೨

ದೇವತೆಗಳೋಪಾದಿ ನಿತ್ಯದ
ಲೇವಮಾದಿ ಸ್ವನಾಮದಿಂದಲಿ
ಯಾವದಿಂದ್ರಿಯಗಳೊಳು ವ್ಯಾಪಾರಗಳ ಮಾಡುವರು
ಸೇವಕರ ಸೇವಾನುಗುಣ ಫಲ
ನೀವ ನೃಪನಂದದಲಿ ತನ್ನ ಸ್ವ
ಭಾವ ಸ್ವಾತಂತ್ರ್ಯ ವಿಭಾಗವ ಮಾಡಿಕೊಟ್ಟ ಹರಿ ೩

ಅಗಣಿತ ಸ್ವಾತಂತ್ರ್ಯವ ನಾ
ಲ್ಕಗೆ ವಿಭಾಗವಮಾಡಿ ಒಂದನು
ತೆಗೆದು ದಶವಿಧ ಗೈಸಿ ಪಾವನೆ ಪಂಚಪ್ರಾಣನಲಿ
ಮೊಗಚತುಷ್ಟಯನೊಳು ಸಪಾದೈ
ದುಗುಣವಿರಿಸಿದ ಮತ್ತೆ ದಶವಿಧ
ಯುಗಳ ಗುಣವನುಮಾಡಿ ಎರಡು ಸದಾಶಿವನೊಳಿಟ್ಟ ೪

ಪಾಕಶಾಸನ ಕಾಮರೊಳು ಸಾ
ರ್ಧೈಕವಿಟ್ಟ ದಶೇಂದ್ರಿಯರಸು ದಿ
ವೌಕಸಾದ್ಯರೊಳೊಂದು ಯಾವಜ್ಜೀವರೊಳಗೊಂದು
ನಾಲ್ಕುವರೆ ಕಲ್ಯಾದಿ ದೈತ್ಯಾ
ನೀಕಕಿತ್ತನು ಎರಡು ತ್ರಿವಿಧ ವಿ
ವೇಕ ಗೈಸಿಂದಿರೆಗೆ ಒಂದೆರಡಾತ್ಮ ತನ್ನೊಳಗೆ ೫

ಈ ವಿಧದಿ ಸ್ವಾತಂತ್ರ್ಯತತ್ವವ
ದೇವಮಾನವ ದಾನವರೊಳು ರ
ಮಾವಿನೋದಿ ವಿಭಾಗಮಾಡಿಟ್ಟಲ್ಲೆ ರಮಿಸುವನು
ಮೂವರೊಳಗಿದ್ದವರ ಕರ್ಮವ
ತಾ ವಿಕಾರವ ಗೈಸದಲೆ ಕ
ಲ್ಯಾವಸ [illegible] ಕೊಡುವನಾಯಾಸನರವರ ಗತಿಯು ೬

ಆಲಯಗಳೊಳಗಿಪ್ಪ ದೀಪ
ಜ್ವಾಲೆ ವರ್ತಿಗಳನುಸರಿಸಿ ಜನ
ರಾಲಿಗೊಪ್ಪುವತೆರದಿ ಹರಿ ತಾ ತೋರ್ಪ ಸರ್ವತ್ರ
ಕಾಲಕಾಲದಿ ಶ್ರೀಧರಾ ದು
ರ್ಗಾಲಲನೆಯೊಡಗೂಡಿ ಸುಖಮಯ
ಲೀಲೆಗೈಯಲು ತ್ರಿಗುಣ ಕಾರ್ಯಗಳಹಪ್ಪ ಜೀವರಿಗೆ ೭

ಇಂದ್ರಿಯಗಳಿಂ ಮಾಳ್ಪ ಕರ್ಮ
ದ್ವಂದ್ವಗಳ ತನಗರ್ಪಿಸಲು ಗೋ
ವಿಂದ ಪುಣ್ಯವಕೊಂಡು ಪಾಪವ ಭಸ್ಮವನೆ ಮಾಳ್ಪ
ಇಂದಿರೇಶನು ಭಕ್ತಜನರನು
ನಿಂದಿಸುವರೊಳಗಿಪ್ಪ ಪುಣ್ಯವ
ತಂದು ತನ್ನವಗೀವ ಪಾಪಗಳವರಿಗುಣಿಸುವನು ೮

ಹೊತ್ತು ಹೊತ್ತಿಗೆ ಪಾಪಕರ್ಮ ಪ್ರ
ವರ್ತಕರ ನಿಂದಿಸದೆ ತನಗಿಂ
ದುತ್ತಮರ ಗುಣಕರ್ಮಗಳ ಕೊಂಡಾಡದಲೆ ಇಪ್ಪ
ಮರ್ತ್ಯರಿಗೆ ಗೋಬ್ರಾಹ್ಮಣ ಸ್ತ್ರೀ
ಹತ್ಯ ಮೊದಲಾದಖಿಳದೋಷ ಗ
ಳಿತ್ತಪನು ಸಂದೇಹ ಬಡೆಸಲ್ಲಖಿಳಶಾಸ್ತ್ರಮತ ೯

ತನ್ನ ಸ್ವಾತಂತ್ರ್ಯ ಗುಣಗಳ ಹಿ
ರಣ್ಯಗರ್ಭಾದ್ಯರಿಗೆ ಕಲಿಮುಖ
ದಾನ್ನವರ ಸಂತತಿಗೆ ಅವರಧಿಕಾರವನುಸರಿಸಿ
ಪುಣ್ಯಪಾಪಗಳೀವ ಬಹು ಕಾ
ರುಣ್ಯ ಸಾಗರನಲ್ಪ ಶಕ್ತಿಗ
ಳುಣ್ಣಲರಿಯದಲಿರಲು ಉಣಗಲಿಸಿದನು ಸರ್ವರಿಗೆ ೧೦

ಸತ್ಯವಿಕ್ರಮ ಪುಣ್ಯಪಾಪ ಸ
ಮಸ್ತರಿಗೆ ಕೊಡಲೋಸುಗದಿ ನಾ
ಲ್ವತ್ತು ಭಾಗವ ಮಾಡಿ ಲೇಶಾಂಶವನು ಜನಕೀವ
ಅತ್ಯಲುಪ ಪರಮಾಣುವಿಗೆ ಸಾ
ಮರ್ಥ್ಯವನು ತಾಕೊಟ್ಟು ಸ್ಥೂಲ ಪ
ದಾರ್ಥಗಳ ನುಂಡುಣಿಪ ಸರ್ವದ ಸರ್ವಜೀವರಿಗೆ ೧೧

ತಿಮಿರ ತರಣಿಗಳೇಕ ದೇಶದಿ
ಸಮನಿಸಿಪ್ಪವೆ ಎಂದಿಗಾದರು
ಭ್ರಮಣ ಚಳಿಬಿಸಿಲಂಜಿಕೆಗಳುಂಟೇನೊ ಪರ್ವತಕೆ
ಅಮಿತ ಜೀವರೊಳಿದ್ದು ಲಕುಮಿ
ರಮಣ ವ್ಯಾಪಾರಗಳ ಮಾಡುವ
ಕಮಲ ಪತ್ರ ಸರೋವರಗಳೊಳಗಿಪ್ಪತೆರನಂತೆ ೧೨

ಅಂಬುಜೋದ್ಭವ ಮುಖ್ಯಸುರ ಕಲಿ
ಶಂಬರಾದಿ ಸಮಸ್ತ ದೈತ್ಯ ಕ
ದಂಬಕನುದಿನ ಪುಣ್ಯಪಾಪ ವಿಭಾಗವನೆ ಮಾಡಿ
ಅಂಬುಧಿಯ ಜಲವನು ಮಹಾಘಟ
ದಿಂಬರಿತು ತುಂಬುವ ತೆರದಿ ಪ್ರತಿ
ಬಿಂಬರೊಳು ತಾನಿದ್ದು ಯೋಗ್ಯತೆಯಂತೆ ಫಲನೀವ ೧೩

ಇನಿತು ವಿಷ್ಣು ರಹಸ್ಯದೊಳುಭೃಗು
ಮುನಿಪ ನಿಂದ್ರದ್ಯುಮ್ನಗರುಪಿದು
ದನು ಬುಧರು ಕೇಳುವುದು ನಿತ್ಯದಿ ಮತ್ಸರವ ಬಿಟ್ಟು
ಅನುಚಿತೋಕ್ತಿಗಳಿದ್ದರೆಯು ಸರಿ
ಗಣನೆ ಮಾಡದಿರೆಂದು ವಿದ್ವ
ಜ್ಜನಕೆ ವಿಜ್ಞಾಪನೆಯ ಮಾಡುವೆ ವಿನಯಪೂರ್ವಕದಿ ೧೪

ವೀತಭಯ ವಿಶ್ವೇಶ ವಿಧಿಪಿತ
ಮಾತುಳಾಂತಕ ಮಾಧ್ವವಲ್ಲಭ
ಭೂತ ಭಾವನನಂತ ಭಾಸ್ಕರತೇಜ ಮಹರಾಜ
ಗೌತಮನ ಮಡದಿಯನು ಕಾಯ್ದಾ
ನಾಥ ರಕ್ಷಕ ಗುರುತಮ ಜಗ
ನ್ನಾಥವಿಠ್ಠಲ ತನ್ನ ನಂಬಿದ ಭಕುತರನು ಪೊರೆವ ೧೫

ಅಂತು ಸಂಧಿ ೧೬ಕ್ಕೆ ಪದ್ಯಗಳು ೪೭ಲಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು



## ಸಂಧಿ ೧೭ "ಸ್ವಾತಂತ್ರ್ಯವಿಭಾಗ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದ ನಾದರದಿ ಕೇಳುವುದು ಪ

ಕಾರುಣಿಕ ಹರಿ ತನ್ನೊಳಿಪ್ಪಾ
ಪಾರ ಸ್ವಾತಂತ್ರ್ಯಗುಣದಿ ನಾ
ನ್ನೂರು ತೆಗೆದು ಸಪಾದವಾರೊಂದಧಿಕವರವತ್ತು
ನಾರಿಗಿತ್ತ ದ್ವಿಷೋಡಶಾಧಿಕ
ನೂರು ಪಾದತ್ರಯವ ತನ್ನ ಶ
ರೀರದೊಳಗೀಪರಿ ವಿಭಾಗವಮಾಡಿ ತ್ರಿಪದಾಂಹ ೧

ಸತ್ಯಲೋಕಾಧಿಪನೊಳಗೆ ಐ
ವತ್ತೆರಡು ಪವಮಾನನೊಳು ನಾ
ಲ್ವತ್ತು ಮೇಲೆಂಟಧಿಕ ಶಿವನೊಳಗಿಟ್ಟನಿಪ್ಪತ್ತು
ಚಿತ್ತಜೇಂದ್ರರೊಳ್ಪದಿಕ ದಶ
ತತ್ವಮಾನಿಗಳೆನಿಪ ಸುರರೊಳು
ಹತ್ತು ಈರೈದಖಿಳ ಜೀವರೊಳಿಟ್ಟ ನಿರವದ್ಯ ೨

ಕಲಿಮೊದಲುಗೊಂಡಖಿಳ ದಾನವ
ರೊಳಗೆ ನಾಲ್ವತ್ತೈದು ಈ ಪರಿ
ತಿಳಿದುಪಾಸನೆಮಾಡು ಮರೆಯದೆ ಪರಮ ಭಕುತಿಯಲಿ
ಇಳೆಯೊಳಗೆ ಸಂಚರಿಸು ಲಕುಮೀ
ನಿಲಯ ನಾಳಾಳೆಂದು ಸರ್ವ
ಸ್ಥಳಗಳಲಿ ಸಂತೈಸುತಿಪ್ಪನು ಗೆಳೆಯನಂದದಲಿ ೩

ಅವನಿಪಸ್ವಾಮಿತ್ವ ಧರ್ಮವ
ಸ್ವವಶಮಾತ್ಯರಿಗಿತ್ತು ತಾಮು
ತ್ತವರ ಮುಖದಲಿ ರಾಜಕಾರ್ಯವ ಮಾಡಿಸುವ ತೆರದಿ
ಕವಿಭಿರೀಡಿತ ತನ್ನ ಕಳೆಗಳ
ದಿವಿಜದಾನವ ಮಾನವರೊಳ
ಟ್ಟವಿರತ ಗುಣತ್ರಯಜ ಕರ್ಮವ ಮಾಡಿ ಮಾಡಿಸುವ ೪

ಪುಣ್ಯಪಾಪಗಳಿಂತೆರದಿ ಕಾ
ರುಣ್ಯಸಾಗರ ದೇವ ದಾನವ
ಮಾನ್ನವರೊಳಿಟ್ಟವರ ಫಲವ್ಯತ್ಯಾಸವನೆ ಮಾಡಿ
ಬನ್ನ ಬಡಿಸುವ ಭಕ್ತಿಹೀನರ
ಸನ್ನುತ ಸುಕರ್ಮಗಳ ತೆಗೆದು ಪ್ರ
ಪನ್ನರಿಗೆ ಕೊಟ್ಟವರ ಸುಖಬಡಿಸುವನು ಸುಭುಜಾಂಹ ೫

ಮಾಣಿಕವ ಕೊಂಡಂಗಡಿಯೊಳಜಿ
ವಾನ ಕೊಟ್ಟಾಪುರುಷನ ಸಮಾ
ಧಾನ ಮಾಡುವ ತೆರದಿ ದೈತ್ಯರು ನಿತ್ಯವಲಿ ಮಾಳ್ಪ
ದಾನ ಯಜ್ಞಾದಿಗಳ ಫಲ ಯುಜ
ಮಾನ ತಾನಪಹರಿಸಿ ಅಸವಿಾ
ಚೀನ ಸುಖಗಳ ಕೊಟ್ಟು ಅಸುರರ ಮುಕ್ತರನು ಮಾಳ್ಪ ೬

ಏಣಲಾಂಛನನಮಲ ಕಿರಣ ಕ್ರ
ಮೇಣ ವೃದ್ಧಿಯನೈದಿ ಲೋಕರ
ಕಾಣಗೊಡದಿಹ ಕತ್ತಲೆಯ ಭಂಗಿಸುವ ತೆರನಂತೆ
ವೈನತೇಯಾಂಸಗನ ಮೂರ್ತಿ
ಧ್ಯಾನವುಳ್ಳ ಮಹಾತ್ಮರಿಗೆ ಸು
ಜ್ಞಾನ ಭಕ್ತ್ಯಾದಿಗಳು ವರ್ಧಿಸಿ ಸುಖವ ಕೊಡುತಿಹವು ೭

ಜನಪನರಿಕೆಯ ಚೋರ ಪೊಳಲೊಳು
ಧನವ ಕದ್ದೊಯಿದೀಯಲವನವ
ಗುಣಗಳೆಣಿಸದೆ ಪೊರೆವ ಕೊಡದಿರೆ ಶಿಕ್ಷಿಸುವ ತೆರದಿ
ಅನುಚಿತೋಚಿತ ಕರ್ಮ ಕೃಷ್ಣಾ
ರ್ಪಣವೆನಲು ಕೈಕೊಂಡು ತನ್ನರ
ಮನೆಯೊಳಿಟ್ಟಾನಂದಪಡಿಸುವ ಮಾಧವಾನತರ ೮

ಅನ್ನದನ್ನಾದನ್ನ ಸಾಮಕ
ಮುನ್ನ ಪೇಳ್ದ ಪ್ರಕಾರ ಜೀವರೊ
ಳನ್ನರೂಪ ಪ್ರವೇಶಗೈದವರವರ ವ್ಯಾಪಾರ
ಬನ್ನಬಡದಲೆ ಮಾಡಿ ಮಾಡಿಸಿ
ಧನ್ಯರಿವರಹುದೆಂದೆನಿಸಿ ತ್ರೈ
ಗುಣ್ಯ ವರ್ಜಿತ ತತ್ತದಾಹ್ವಯನಾಗಿ ಕರೆಸುವನು ೯

ಸಲಿಲಬಿಂದು ಪಯೋಬ್ಧಿಯೊಳು ಬೀ
ಳಲು ವಿಕಾರವನೈದಬಲ್ಲುದೆ
ಜಲವು ತದ್ರೂಪವನೆ ಐದುವದೆಲ್ಲ ಕಾಲದಲಿ
ಕಲಿಮಲಾಪಹನರ್ಚಿಸುವ ಸ
ತ್ಕುಲಜರ ಕುಕರ್ಮಗಳು ತಾವ್ನಿ
ಷ್ಫಲುಷ ಕರ್ಮಗಳಾಗಿ ಪುರುಷಾರ್ಥಗಳ ಕೊಡುತಿಹವು ೧೦

ಮೊಗದೊಳಗೆ ಮೊಗವಿಟ್ಟು ಮುದ್ದಿಸಿ
ಮಗುವಿನಂ ಬಿಗಿದಪ್ಪಿ ಸ್ನೇಹದಿ
ತೆಗೆದು ತನ್ನಯಸ್ತನಗಳುಣಿಸುವ ಜನನಿಯಂದದಲಿ
ಅಗಣಿತಾತ್ಮನು ತನ್ನ ಪಾದಾ
ಬ್ಜಗಳ ಧೇನಿಪ ಭಕ್ತ ಜನರಿಗೆ
ಪ್ರಘಟಕನು ತಾನಾಗಿ ಸೌಖ್ಯಗಳೀವ ಸರ್ವತ್ರ ೧೧

ತೋಟಿಗನು ಭೂಮಿಯೊಳು ಬೀಜವ
ನಾಟಬೇಕೆಂದೆನುತ ಹಿತದಲಿ
ವೋಟಿಯಿಂ ನೀರೆತ್ತಿ ಸಸಿಗಳ ಸಂತಯಿಸುವಂತೆ
ಪಾಟು ಬಡದಲೆ ಜಗದಿ ಜೀವರ
ಘೋಟಕಾಸ್ಯನು ಸೃಜಿಸಿ ಯೋಗ್ಯತೆ
ದಾಟಗೊಡದಲೆ ಸಲಹುತಿಪ್ಪನು ಸರ್ವಕಾಲದಲಿ ೧೨

ಭೂಮಿಯೊಳು ಜಲವಿರ ತೃಷಾರ್ತನು
ತಾ ಮರೆದು ಮೊಗವೆತ್ತಿ ವೀಕ್ಷಿಸ
ವ್ಯೋಮ ಮಂಡಲದೊಳಗೆ ಕಾಣದೆ ಮಿಡುಕುವಂದದಲಿ
ಶ್ರೀ ಮನೋರಮ ಸರ್ವರಂತ
ರ್ಯಾಮಿಯಾಗಿರೆ ತಿಳಿಯದನುದಿನ
ಭ್ರಾಮಕರು ಭಜಿಸುವರು ಭಕುತಿಯಲನ್ಯದೇವತೆಯ ೧೩

ಮುಖ್ಯಫಲ ವೈಕುಂಠ ಮುಖ್ಯಾ
ಮುಖ್ಯಫಲ ಮಹದಾದಿ ಲೋಕಾ
ಮುಖ್ಯಫಲ ವೈಷಯಿಕವೆಂದರಿದತಿ ಭಕುತಿಯಿಂದ
ರಕ್ಕಸಾರಿಯ ಭಜಿಸುತಲಿ ನಿ
ರ್ದುಃಖನಾಗು ನಿರಂತರದಿ ಮರೆ
ಪೊಕ್ಕವರ ಬಿಡ ಭಕ್ತವತ್ಸಲ ಭಾರತೀಶ ಪಿತ ೧೪

ವ್ಯಾಧಿಯಿಂ ಪೀಡಿತ ಶಿಶುವಿಗೆ ಗು
ಡೋದಕವ ನೆರೆದದಕೆ ಔಷಧ
ತೇದುಕುಡಿಸುವ ತಾಯಿಯೋಪಾದಿಯಲಿ ಸರ್ವಜ್ಞ
ಬಾದರಾಯಣ ಭಕ್ತಜನಕೆ ಪ್ರ
ಸಾದರೂಪಕನಾಗಿ ಭಾಗವ
ತಾದಿಯಲಿ ಪೇಳಿದನು ಧರ್ಮಾದಿಗಳ ಫಲವೆಂದು ೧೫

ದೂರದಲ್ಲಿಹ ಪರ್ವತ ಘನಾ
ಕಾರ ತೋರ್ಪುದು ನೋಳ್ಪ ಜನರಿಗೆ
ಸಾರೆಗೈಯಲು ಸರ್ಪ ವ್ಯಾಘ್ರಗಳಿಂದೆ ಭಯವಿಹುದು
ಘೋರತರ ಸಂಸಾರ ಸೌಖ್ಯಾ
ಸಾರತರವೆಂದರಿದು ನಿತ್ಯ ರ
ಮಾರಮಣನಾರಾಧಿಸುವರದರಿಂದ ಬಲ್ಲವರು ೧೬

ಕೆಸರ ಘಟಗಳ ಮಾಡಿ ಬೇಸಿಗೆ
ಬಿಸಿಲೊಳಿಟ್ಟೊಣಗಿಸಿದರದು ಘನ
ರಸವ ತುಂಬಲು ಬಹುದೆ ಸರ್ವ ಸ್ವತಂತ್ರ ತಾನೆಂಬ
ಪಶುಪ ನರನೇನೇನು ಮಾಳ್ಪಾ
ನಶನ ದಾನಸ್ನಾನ ಕರ್ಮಗ
ಳೊಸರಿ ಪೋಪುವು ಬರಿದೆ ದೇಹಾಯಾಸವನೆ ಕೊಟ್ಟು ೧೭

ಎರಡು ದೀಕ್ಷೆಗಳಿಹವು ಬಾಹ್ಯಾಂ
ತರವೆನಿಪ ನಾಮದಲಿ ಬುಧರಿಂ
ದರಿತು ದೀಕ್ಷಿತನಾಗು ದೀರ್ಘದ್ವೇಷಗಳ ಬಿಟ್ಟು
ಹರಿಯೆ ಸರ್ವೋತ್ತಮ ಕ್ಷರಾಕ್ಷರ
ಪುರುಷ ಪೂಜಿತಪಾದ ಜನ್ಮಾ
ದ್ಯರವಿದೂರ ಸುಖಾತ್ಮ ಸರ್ವಗನೆಂದು ಸ್ಮರಿಸುತಿರು ೧೮

ಹೇಯ ವಸ್ತುಗಳಿಲ್ಲ ಊಪಾ
ದೇಯ ವಸ್ತುಗಳಿಲ್ಲ ನ್ಯಾಯಾ
ನ್ಯಾಯ ಧರ್ಮಗಳಿಲ್ಲ ದ್ವೇಷಾಸೂಯ ಮೊದಲಿಲ್ಲ
ತಾಯಿ ತಂದೆಗಳಿಲ್ಲ ಕಮಲದ
ಳಾಯತಾಕ್ಷಂಗೆನಲು ಈಸುವ
ಕಾಯಿಯಂದದಿ ಮುಳುಗಗೊಡದೆ ಭವಾಬ್ಧಿ ದಾಟಿಸುವ ೧೯

ಮಂದನಾದರು ಸರಿಯೆ ಗೋಪೀ
ಚಂದನ ಶ್ರೀ ಮುದ್ರೆಗಳ ನಲ
ವಿಂದ ಧರಿಸುತ ಶ್ರೀ ತುಲಸಿ ಪದ್ಮಾಕ್ಷ ಸರಗಳನು
ಕಂಧರದ ಮಧ್ಯದಲಿ ಧರಿಸಿ ಮು
ಕುಂದ ಶ್ರೀ ಭೂರಮಣ ತ್ರಿಜಗ
ದ್ವಂದ್ಯ ಸರ್ವಸ್ವಾಮಿ ಮಮಕುಲ ದೈವವೆನೆ ಪೊರೆವ ೨೦

ನ್ಯಾಯವಾದ ಧನದಿಂದ ಜನರಿಗೆ
ನಾಯಕ ಪ್ರಭುಯೆಂಬಿ ಪೂರ್ವದಿ
ತಾಯಿ ಪೊಟ್ಟೆಯೊಳಿರಲು ಪ್ರಭುವೆಂದೇಕೆ ಕರೆಯರೆಲೆ
ಕಾಯ ನಿನ್ನದು ಬಿಟ್ಟುಪೋಗಲು
ರಾಯ ನೀನೆಂಬುವ ಪ್ರಭುತ್ವ ಪ
ಲಾಯನವ ನೈದಿತು ಸಮೀಪದಲಿದ್ದರದ ತೋರು ೨೧

ವಾಸುದೇವೈಕ ಪ್ರಕಾರದ
ಲೀಶನೆನಿಸುವ ಬ್ರಹ್ಮರುದ್ರ ಶ
ಚೀಶ ಮೊದಲಾದಮರರೆಲ್ಲರು ದಾಸರೆನಿಸುವರು
ಈ ಸುಮಾರ್ಗವ ಬಿಟ್ಟು ಸೋಹಮು
ಪಾಸನೆಯ ಗೈವನರ ದೇಹಜ
ದೈಶಿಕ ಕ್ಲೇಶಗಳು ಬರಲವನೇಕೆ ಬಿಡಿಸಿಕೊಳ ? ೨೨

ಆ ಪರಬ್ರಹ್ಮನಲಿ ತ್ರಿಜಗ
ದ್ವ್ಯಾಪಕತ್ವ ನಿಯಾಮಕತ್ವ
ಸ್ಥಾಪಕತ್ವ ವಶತ್ವ ಈಶತ್ವಾದಿಗುಣಗಳಿರೆ
ಲೋಪವಿಲ್ಲೇಕ ಪ್ರಕಾರ ಸ್ವ
ರೂಪವೆನಿಪುವು ಸರ್ವಕಾಲದಿ
ಪೋಪವಲ್ಲವು ಜೀವರಿಗೆ ದಾಸತ್ವದೋಪಾಧಿ ೨೩

ನಿತ್ಯ ನೂತನನಿರ್ವಿಕಾರ ಸು
ಹೃತ್ತಮನು ಪ್ರಣವಸ್ಥವರ್ಣೋ
ತ್ಪತ್ತಿಕಾರಣ ವಾಙ್ಮನೋಮಯ ಸಾಮಗಾನರತ
ದತ್ತ ಕಪಿಲಹಯಾಸ್ಯ ರೂಪದಿ
ಪೃಥಕ್ಪೃಥಕು ಜೀವರೊಳಗಿದ್ದು ಪ್ರ
ವರ್ತಿಸುವನವರವರ ಯೋಗ್ಯತೆ ಕರ್ಮವನುಸರಿಸಿ ೨೪

ಶ್ರುತಿಗಳಾತನ ಮಾತು ವಿಮಲ
ಸ್ಮೃತಿಗಳಾತನ ಶಿಕ್ಷೆ ಜೀವ
ಪ್ರತತಿ ಪ್ರಕೃತಿಗಳೆರಡು ಪ್ರತಿಮೆಗಳೆನಿಸಿಕೊಳುತಿಹವು
ಇತರ ಕರ್ಮಗಳಲ್ಲ ಲಕುಮಿ
ಪತಿಗೆ ಪೂಜೆಗಳೆಂದು ಸ್ಮರಿಸುತ
ಚತುರವಿಧ ಪುರುಷಾರ್ಥಗಳ ಬೇಡದಿರು ಸ್ವಪ್ನದಲು ೨೫

ಭೂತಳಾಧಿಪನಾಜ್ಞಾ ಧಾರಕ
ದೂತರಿಗೆ ಸೇವಾನುಸಾರದಿ
ವೇತನವ ಕೊಟ್ಟವರ ಸಂತೋಷಿಸುವ ತೆರನಂತೆ
ಮಾತರಿಶ್ವಪ್ರಿಯನು ಪರಮ
ಪ್ರೀತಿ ಪೂರ್ವಕ ಸದ್ಗುಣಂಗಳ
ಗಾಧಕರ ಸಂತೋಷಬಡಿಸುವ ನಿಹಪರಂಗಳಲಿ ೨೬

ದೀಪ ದಿವದಲಿಕಂಡರಾದಡೆ
ಲೋಪ ಗೈಸುವರಾಕ್ಷಣ ಹರಿಸ
ಮಾಪದಲ್ಲರೆ ನಂದನಾಮ ಸುನಂದವೆನಿಸುವುದು
ಔಪಚಾರಿಕವಲ್ಲ ಸುಜನರ
ಪಾಪಕರ್ಮವು ಪುಣ್ಯವೆನಿಪುದು
ಪಾಪಿಗಳ ಸತ್ಪುಣ್ಯ ಕರ್ಮವು ಪಾಪವೆನಿಸುವುದು ೨೭

ಧನವ ಸಂಪಾದಿಸುವ ಪ್ರದ್ಯು
ವಣಿಕರಂದದಿ ಕೋವಿದರ ಮನೆ
ಮನೆಗಳಲಿ ಸಂಚರಿಸು ಶಾಸ್ತ್ರ ಶ್ರವಣ ಗೋಸುಗದಿ
ಮನನಗೈದುಪದೇಶಿಸುತ ದು
ರ್ಜನರ ಕೂಡಾಡದಿರು ಸ್ವಪ್ನದಿ
ಪ್ರಣತ ಕಾಮವ ಕೊಡುವ ಸೌಖ್ಯವಸಿಹಪರಂಗಳಲಿ ೨೮

ಕಾರಕಕ್ರಿಯ ದ್ರವ್ಯ ವಿಭ್ರಮ
ಮೂರುವಿಧ ಜೀವರಿಗೆ ಬಹು ಸಂ
ಸಾರಕಿವು ಕಾರಣವೆನಿಸುವುವು ಎಲ್ಲ ಕಾಲದಲಿ
ದೂರಕೋಡಿಸಿ ಭ್ರಾಮಕತ್ರಯ
ಮಾರಿಗೊಳಗಾಗದಲೆ ಸರ್ವಾ
ಧಾರಕನ ಚಿಂತಿಸುತಲಿರು ಸರ್ವತ್ರ ಮರೆಯದಲೆ ೯

ಕರಣ ಕರ್ಮವ ಮಾಡಿದರ ವಿ
ಸ್ಮರಣೆ ಕಾಲದಿ ಮಾತುಗಳಿಗು
ತ್ತರವ ಕುಡದಲೆ ಸುಮ್ಮನಿಪ್ಪನು ಜಾಗರಾವಸ್ಥೆ
ಕರುಣಿಸಲು ವ್ಯಾಪಾರಮಾಡುವ
ಬರಲು ನಾಲ್ಕಾವಸ್ಥೆಗಳ ಪರಿ
ಹರಿಸಿಕೊಳನೇತಕೆ ಸ್ವತಂತ್ರನು ತಾನೆಯೆಂಬುವನು ೩೦

ಯುಕ್ತಿಮಾತುಗಳಲ್ಲ ಶ್ರುತಿಸ್ಮೃ
ತ್ಯುಕ್ತ ಮಾತುಗಳಿವು ವಿಚಾರಿಸೆ
ಮುಕ್ತಿಗಿವು ಸೋಪಾನವೆನಿಪುವು ಪ್ರತಿ ಪ್ರತೀಪದವು
ಭಕ್ತಿಪೂರ್ವಕ ಪಠಿಸುವವರಿಗೆ
ವ್ಯಕ್ತಿಕೊಡುವ ಸ್ವರೂಪ ಸುಖ ಪ್ರವಿ
ವಿಕ್ತರನು ಮಾಡುವನು ಭವಭಯದಿಂದ ಬಹುರೂಪ ೩೧

ಶ್ರೀನಿವಾಸನ ಸುಗುಣ ಮಣಿಗಳ
ಪ್ರಾಣ ಮತವಯುನಾಖ್ಯ ಸೂತ್ರದಿ
ಪೋಣಿಸಿದ ಮಾಲಿಕೆಯ ವಾಙ್ಮಯನಂಸಕರ್ಪಿಸಿದೆ
ಜ್ಞಾನಿಗಳ ದೃಗ್ವಿಷಯವಹುದ
ಜ್ಞಾನಿಗಳಿಗೆ ಅಸಹ್ಯ ತೋರ್ಪುದು
ಮಾಣಿಕವ ಮರ್ಕಟನ ಕೈಯೊಳು ಕೊಟ್ಟ ತೆರನಂತ ೩೨

ಶ್ರೀವಿಧೀರ ವಿಪಾಹಿಪೇಶ ಶ
ಚೀವರಾತ್ಮಭವಾರ್ಕಶಶಿ ದಿ
ಗ್ದೇವ ಋಷಿಗಂಧರ್ವ ಕಿನ್ನರಸಿದ್ಧ ಸಾಧ್ಯಗಣ
ಸೇವಿತ ಪದಾಂಭೋಜ ತತ್ವಾ
ದಾವಲಂಬಿಗಳಾದ ಭಕ್ತರ
ಕಾವ ಕರುಣಾಸಾಂದ್ರ ಲಕ್ಷ್ಮೀ ಹೃತ್ಕುಮುದ ಚಂದ್ರ ೩೩

ಆದರಸಿಯು ಗತಾಕ್ಷ ಭಾಷಾ
ಭೇದದಿಂದಲಿ ಕರೆಯಲದನು ನಿ
ಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳು
ಮಾಧವನ ಗುಣಪೇಳ್ವ ಪ್ರಾಕೃತ
ವಾದರೆಯು ಪರಿಕೇಳಿ ಪರಮಾ
ಹ್ಲಾದ ಬಡದಿಪ್ಪರೆ ನಿರಂತರ ಬಲ್ಲಕೋವಿದರು ೩೪

ಭಾಸ್ಕರನ ಮಂಡಲವ ಕಂಡು ನ
ಮಸ್ಕರಿಸಿ ಮೋದಿಸದೆ ದ್ವೇಷದಿ
ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ
ಸಂಸ್ಕೃತವಿದಲ್ಲೆಂದು ಕುಹಕ ತಿ
ರಸ್ಕರಿಸಲೇನಹುದು ಭಕ್ತಿ ಪು
ರಸ್ಕರದಿ ಕೇಳ್ವರಿಗೆ ಒಲಿವನು ಪುಷ್ಕರಾಕ್ಷಸದ ೩೫

ಪತಿತನ ಕಪಾಲದಲಿ ಭಾಗೀ
ರಥಿಯು ಜಲವಿರೆ ಪೇಯವೆನಿಪುದೆ
ಇತರಕವಿ ನಿರ್ಮಿತ ಕುಕಾವ್ಯಶ್ರಾವ್ಯ ಬುಧರಿಂದ
ಕೃತಿಪತಿ ಕಥಾನ್ವಿತವೆನಿಪ ಪ್ರಾ
ಕೃತವೆ ತಾ ಸಂಸ್ಕೃತವೆನಿಸಿ ಸ
ದ್ಗತಿಯನೀವುದು ಭಕ್ತಿಪೂರ್ವಕ ಕೇಳಿ ಪೇಳ್ವರಿಗೆ ೩೬

ವೇದಶಾಸ್ತ್ರ ಸಯುಕ್ತಿ ಗ್ರಂಥಗ
ಳೋದಿ ಕೇಳ್ದವನಲ್ಲ ಸಂತತ
ಸಾಧುಗಳ ಸಹವಾಸ ಸಲ್ಲಾಪಗಳು ಮೊದಲಿಲ್ಲ
ಮೋದತೀರ್ಥಾರ್ಯರ ಮತಾನುಗ
ರಾದವರ ಕರುಣದಲಿ ಪೇಳ್ದೆ ರ
ಮಾಧವ ಜಗನ್ನಾಥ ವಿಠ್ಠಲ ತಿಳಿಸಿದುದರೊಳಗೆ ೩೭

ಅಂತು ಸಂಧಿ ೧೭ಕ್ಕೆ ಪದ್ಯಗಳು ೫೩೪ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

## ಸಂಧಿ ೧೮ "ಬಿಂಬೋಪಾಸನಾ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದನಾದರದಿ ಕೇಳುವುದು ಪ

ಮುಕ್ತ ಬಿಂಬನು ತುರಿಯ ಜೀವ
ನ್ಮುಕ್ತ ಬಿಂಬನು ವಿಶ್ವನ ಸಂ
ಸಕ್ತ ಬಿಂಬನು ತೈಜಸನು ಅಸ್ಪೃಶ್ಯರಿಗೆ ಪ್ರಾಜ್ಞ
ಶಕ್ತನಾದರು ಸರಿಯೆ ಸರ್ವಾ
ವಿರಕ್ತ ಮಹಿಮನು ದುಃಖ ಸುಖಗಳ
ವ್ಯಕ್ತ ಮಾಡದಲಿಪ್ಪ ಕಲ್ಪಾಂತದಲಿ ಬಪ್ಪರಿಗೆ ೧

ಅನ್ನನಾಮಕ ಪ್ರಕೃತಿಯೊಳಗಾ
ಚ್ಛನ್ನನಾಗಿಹ ಪ್ರಾಜ್ಞನಾಮದಿ
ಸೊನ್ನೊಡಲ ಮೊದಲಾದವರೊಳನ್ನಾದ ತೈಜಸನು
ಅನ್ನದಾಂಬುಜನಾಭ ವಿಶ್ವನು
ಭಿನ್ನನಾಮಕ್ರಿಯೆಗಳಿಂದಲಿ
ತನ್ನೊಳಗೆ ತಾ ರಮಿಪ ಪೂರ್ಣಾನಂದ ಜ್ಞಾನಘನ ೨

ಬೂದಿಯೊಳಗಡಗಿಪ್ಪನಳನೋಂ
ಪಾದಿ ಚೇತನ ಪ್ರಕೃತಿಯೊಳಗ
ನ್ನಾದ ನನ್ನಾಹ್ವಯದಿ ಕರೆಸುವ ಬ್ರಹ್ಮಶಿವರೂಪಿ
ಓದನಪ್ರದ ವಿಷ್ಣು ಪರಮಾ
ಹ್ಲಾದವೀವುತ ತೃಪ್ತಿಪಡಿಸುವ
ಗಾಧ ಮಹಿಮನ ಚಿತ್ರಕರ್ಮವನಾವ ಬಣ್ಣಿಸುವ ೩

ನಾದ ಭೋಜನ ಶಬ್ದದೊಳು ಬಿಂ
ಮೋದನೋದಕದೊಳಗೆ ಪೋಷನು
ವಾದದೊಳು ಶಾಂತಾಖ್ಯ ಜಠರಾಗ್ನಿಯೊಳಗಿರುತಿಪ್ಪ
ವೈದಿಕ ಸುಶಬ್ದದೊಳು ಪುತ್ರ ಸ
ಹೋದರಾನುಗರೊಳತಿ ಶಾಂತನ
ಪಾದ ಕಮಲನವರತ ಚಿಂತಿಸು ಈ ಪರಿಯಲಿಂದ ೪

ವೇದಮಾನಿ ರಮಾಸುಪಾಸ್ಯ ಗು
ಣೋದಧಿ ಗುಣತ್ರಯ ವಿವರ್ಜಿತ
ಸ್ವೋದರಸ್ಥಿತನಿಖಿಳ ಬ್ರಹ್ಮಾಂಡಾದ್ವಿಲಕ್ಷಣನು
ಸಾಧು ಸಮ್ಮತವನಿಸುತಿಹ ಸಿಮು
[illegible]ಂದ ಗಣಪತಿಯೆಂಬ ಶ್ರುತಿಪ್ರತಿ
ಪಾದಿಸುವ ಪದಸವರತವನಗುಣ ಪ್ರಾಂತಗಾಣದಲೆ ೫

ಕರೆಸುವನು ಮಾಯಾರಮಣ ತಾ
ಪುರ[illegible] ರೂಪದಿ ತ್ರಿಸೃಷ್ಟಿಗಳೊಳು
ಪರಮ ಸತ್ಪುರುಷಾಭಿಧಾದ ಮಹತ್ತತ್ವದೊಳಗಿದ್ದು
ಸರಸಿಜ ಭವಾಂಡಸ್ಥಿತ ಸ್ತ್ರೀ
ಪುರುಷ ತನ್ಮಾತ್ರಗಳನೇಕೋ
ತ್ತರ ದಶೇಂದ್ರಿಯಗಳ ಮಹಾ ಭೂತಗಳ ನಿರ್ಮಿಸಿದ ೬

ಈ ಪರಿಂ[illegible]ಗಪುರುಷ ತ್ರಿಗುಣದಿ
ಶ್ರೀ[illegible] ತಾನಿದ್ದು ಜೀವರಿ
ಗಾಪತಿ[illegible] ಜ್ಞಾನ ಮದ ಮತ್ಸರ ಕುಮೋಹ ಕ್ಷುಧಾ
ಹಾ[illegible]ಷ ಸುಷುಪ್ತಿ ಸ್ವಪ್ನಸಿ
ಪಾಸ[illegible]ತಿ ಜನ್ಮ ಸ್ಥಿತಿ ಮೃತಿ
ಮೋಷ ಪುಣ್ಯ ಜಯಾಪಜಯ ದ್ವಂದ್ವಗಳ ಕಲ್ಪಿಸಿದ ೭

ತ್ರಿವಿಧ ಗುಣಮಯ ದೇಹ ಜೀವಕೆ
ಕವಚದಂದದಿ ತೊಡಿಸಿ ಕರ್ಮ
ಪ್ರವಹದೊಳು ಸಂಚಾರಮಾಡಿಸುತಿಪ್ಪ ಜೀವರನು
ಕಪಿಸಿ ಮಾಯಾರಮಣ ವಿಮೋಹವ
ಭವಕೆ ಕಾರಣನಾಗುವನು ಸಂ
ಶ್ರವಣ ಮನನವ ಮಾಳ್ಪರಿಗೆ ಮೋಚಕನೆನಿಸುತಿಪ್ಪ ೮

ಸಾಶನಾಹ್ವಯ ಸ್ತ್ರೀ ಪುರುಷರೊಳು
ವಾಸವಾಗಿಹನೆಂದರಿದು ವಿ
ಶ್ವಾಸ ಪೂರ್ವಕ ಭಜಿಸಿ ತೋಷಿಸು ಸ್ವಾವರೋತ್ತಮರ
ಕ್ಲೇಶನಾಶನನಜಲಗಳೊಳು ಪ್ರ
ಕಾಶಿಸುತಲನಶನನ ರೂಪೋ
ಪಾಸನೆಯ ಮಾಳ್ಪರಿಗೆ ತೋರ್ಪನು ತನ್ನ ನಿಜರೂಪ ೯

ಪ್ರಕರದಂತರ ಚಿಂತಿಸುವುದೀ
ಪ್ರಕೃತಿಯೊಳು ವಿಶ್ವಾದಿ ರೂಪನ
ಪ್ರಕಟಮಾಳ್ಪನು ಯಥಾಮತಿಯೊಳು ಗುರು ಕೃಪಾಬಲದಿ
ಮುಕುರ ನಿರ್ಮಿತ ಸದನದೊಳು ಪೊಗೆ
ಸ್ವಕಿಯ ರೂಪವ ಕಾಂಬ ತೆರದಲಿ
ಅಕುಟಿಲಾತ್ಮ ಚರಾಚರದಿ ಸರ್ವತ್ರ ತೋರುವನು ೧೦

ಪರಿಮಿತತ್ರಯ ಪ್ರಕೃತಿಯೊಳು ತಾ
ನಿರುತಿಹನು ವಿಶ್ವಾದಿ ರೂಪವ
ಧರಿಸುತಾತ್ಮಾದಿ ತ್ರಿರೂಪವ ನೀಷಣತ್ರಯದಿ
ಸುರುಚಿ ಜ್ಞಾನಾತ್ಮ ಸ್ವರೂಪದಿ
ತುರಿಯನಾಮಕ ವಾಸುದೇವನ
ಸ್ಮರಿಸು ಮುಕ್ತಿ ಸುಖಪ್ರದಾಯಕ ನೀತನಹುದೆಂದು ೧೧

ಕಮಲಸಂಭವ ಜನಕ ಜಡ ಜಂ
ಗಮರೊಳಗೆ ನೆಲೆಸಿದ್ದು ಕ್ರಮ ವಿ
ಕ್ರಮದಿ ಕರ್ಮವಮಾಡಿ ಮಾಡಿಸುತಿಪ್ಪ ಬೇಸರದೆ
ಕ್ಷಮನು ಕ್ಷಾಮ ಕ್ಷಮಿಹಿನಾಹ್ವಯ
ಸುಮನಸಾಸುರರೊಳಗೆ ಹಮ್ಮಮ
ಸಮಮಯೆಂದೀಬಗೆಯುಪಾಸನೆ ಗೈವ ಪ್ರಾಂತದಲಿ ೧೨

ಈ ಸಮಸ್ತ ಜಗತ್ತು ಈಶಾ
ವಾಸ್ಯವೆನಿಪುದು ಕಾರ್ಯರೂಪವು
ನಾಶವಾದರು ನಿತ್ಯವೆ ಪರಿಕಾರಣ ಪ್ರಕೃತಿ
ಶ್ರೀಶಗ ಜಡ ಪ್ರತಿಮೆಯೆನಿಪುದು
ಮಾಸವೊಮ್ಮಗು ಸನ್ನಿಧಾನವು
ವಾಸವಾಗಿಹ ನಿತ್ಯ ಸಾಲಿಗ್ರಾಮಮೋಪಾದಿ ೧೩

ಏಕಮೇವಾದ್ವಿತಿಯ ರೂಪಾ
ನೇಕ ಜೀವರೊಳಿದ್ದು ತಾ ಪ್ರ
ತ್ಯೇಕ ಕರ್ಮವಮಾಡಿ ನೋಡಿಸುತಿಪ್ಪ ತಿಳಿಸದಲೆ
ಮೂಕ ಬಧಿರಾಂಧಾದಿ ನಾಮಕ
ನೀ ಕಳೇವರದೊಳಗೆ ಕರೆಸುವ
ಮಾಕಳತ್ರನ ಲೌಕಿಕ ಮಹಾ ಮಹಿಮೆಗೇನೆಂಬೆ ೧೪

ಲೋಕ ಬಂಧುರ್ಲೋಕನಾಥ ವಿ
ಶೋಕ ಭಕ್ತರಶೋಕ ನಾಶನ
ಶ್ರೀಕರಾರ್ಚಿತ ಶೋಕದಂದವಲಿಪ್ಪ ಸರ್ವರೊಳು
ಸಾಕುವನು ಸಜ್ಜನರ ಪರಮ ಕೃ
ಪಾಕರೇಶ ಪಿನಾಕಿ ಸನ್ನುತ
ಸ್ವೀಕರಿಸುವಾನತರು ಕೊಟ್ಟ ಸಮಸ್ತ ಕರ್ಮಗಳ ೧೫

ಆಹಿತ ಪ್ರತಿಮೆಗಳೆನಿಸುವವು
ದೇಹ ಗೇಹಾಪತ್ಯ ಸತಿ ಧನ
ಲೋಹ ಕಾಷ್ಠ ಶಿಲಾ ಮೃದಾತ್ಮಕವಾದ ದ್ರವ್ಯಗಳು
ಸ್ನೇಹದಲಿ ಪರಮಾತ್ಮನೆನಗಿ
ತ್ತೀಹನೆಂದರಿದನುದಿನದಿ ಸ
ನ್ಮೋಹಕೊಳಗಾಗದಲೆ ಪೂಜಿಸು ಸರ್ವನಾಮಕನ ೧೬

ಶ್ರೀ ತರುಣಿ ವಲ್ಲಭಗೆ ಜೀವರು
ಚೇತನ ಪ್ರತಿಮೆಗಳು ಓತ
ಪ್ರೋತನಾಗಿದ್ದೆಲ್ಲರೊಳು ವ್ಯಾಪಾರಮಾಡುತಿಹ
ಹೋತ ಸರ್ವೇಂದ್ರಿಯಗಳೊಳು ಸಂ
ಪ್ರೀತಿಯಿಂದುಂಡುಣಿಸಿ ವಿಷಯ ವಿ
ಪಾತದೇಶಗ ದೀಪವಂದದಲಿಪ್ಪ ನಿರ್ಭಯದಿ ೧೭

ಭೂತಸೋಕಿದ ಮಾನವನು ಬಹು
ಮಾತನಾಡುವ ತೆರದಿ ಮಹ
ದ್ಭೂತ ವಿಷ್ಣ್ವಾವೇಶದಿಂದಲಿ ವರ್ತಿಪುದು ಜಗವ
ಕೈತವೋಕ್ತಿಗಳಲ್ಲ ಶೇಷ ಧ
ರಾತಪತ್ರಗೆ ಜೀವಪಂಚಕ
ವ್ರಾತವೆಂದಿನು ಭಿನ್ನನಾಮಾಹ್ವಯದಿ ಕರೆಸುವುದು ೧೮

ದಿವಿಯೊಳಿಪ್ಪವು ಮೂರು ಪಾದಗ
ಳವನಿಯೊಳಗಿಹುದೊಂದು ಈ ವಿಧ
ಕವಿಭಿರೀಡಿತ ಕರಸುವ ಚತುಷ್ಪಾತು ತಾನೆಂದು
ಇವನ ಪಾದ ಚತುಷ್ಟಯಗಳನು
ಭವಕೆ ತಂದು ನಿರಂತರದಲು
ದ್ಭವನ ಸಖ ಸರ್ವಾಂತರಾತ್ಮಕನೆಂದು ಸ್ಮರಿಸುತಿರು ೧೯

ವಂಶಬಾಗಲು ಬೆಲೆಯು ಕಂಡು ನ
ರಾಂಶವಲಿ ಶೋಭಿಪುದು ಬಾಗದ
ವಂಶ ಪಾಶದಿಕಟ್ಟಿಯೇರುವ ಡೊಂಬ ಮಸ್ತಕಕೆ
ಕಂಸಮರ್ದನ ದಾಸರಿಗೆ ನಿ
ಸ್ಸಂಶಯದಿ ವಂದಿಸದೆ ನಾ ವಿ
ದ್ವಾಂಸನೆಂದು ಅಹಂಕರಿಸೆ ಭವಗುಣದಿ ಬಂಧಿಸುವ ೨೦

ಜ್ಯೋತಿರೂಪಗ ಪ್ರತಿಮೆಗಳು ಸಾಂ
ಕೇತಿಕಾರೋಪಿತ ಸುಪೌರುಷ
ಧಾತುಸಪ್ತಕ ಧೈರ್ಯ ಶೌರ್ಯೌದಾರ್ಯ ಚಾತುರ್ಯ
ಪೂತು ಮಾನ ಮಪತ್ಯ ಸಹನ ಸು
ನೀತಿ ನಿರ್ಮಲ ದೇಹ ಬ್ರಾಹ್ಮಣ
ಭೂತ ಪಂಚಕ ಬುದ್ಧಿ ಮೊದಲಾದಿಂದ್ರಿಯಸ್ಥಾನ ೨೧

ಜೀವರಾಶಿಯೊಳವ್ಯಕ್ತ ವ್ಯಕ್ತ
ಸ್ಥಾವರಗಳೊಳು ಸ್ಥಾಣುನಾಮಕ
ನಾವಕಾಲದಲಿಪ್ಪ ನಜಿತಾನಂತನೆಂದೆನಿಸಿ
ಗೋವಿದಾಂಪತಿ ಗಾಯನಪ್ರಿಯ
ಸಾಮಯುತ ಸಾಹಸ್ರನಾಮ ಪ
ರಾವರೇಶ ಪವಿತ್ರಕರ್ಮ ವಿಪಶ್ಚಿತನುನಾಮ ೨೨

ಮಾಧವನ ಪೂಜಾರ್ಥವಾಗಿ ನಿ
ಷೇಧ ಕರ್ಮವಮಾಡಿ ಧನ ಸಂ
ಪಾದಿಸಲು ಸತ್ಪುಣ್ಯ ಕರ್ಮಗಳೆನಿಸಿಕೊಳುತಿಹವು
ಸ್ವೋದರಂಭರಣಾರ್ಥ ನಿತ್ಯದಿ
ಸಾಧುಕರ್ಮವ ಮಾಡಿದರು ಸರಿ
ಯೈದುವನು ದೇಹಾಂತರವ ಸಂದೇಹವಿನಿತಿಲ್ಲ ೨೩

ಅಪಗತಾಶ್ರಯನೆಲ್ಲರೊಳಗಿ
ದ್ದುಪಮನೆನಿಪನಸುಪಪುರೂಪನು
ಶಫರಕೇತನ ಜನಕ ಮೋಹಿಪ ಮೋಹಕನ ತೆರದಿ
ತಪನಕೋಟಿ ಸಮಪ್ರಭಾಸಿತ
ವಪುವೆನಿಪ ಕೃಷ್ಣಾದಿರೂಪಕ
ದ್ವಿಪಗಳಂತುಂಡುಣಿಪ ಸರ್ವತ್ರದಲಿ ನೆಲೆಸಿದ್ದು ೨೪

ಅಡವಿಯೊಳು ಬಿತ್ತದಲೆ ಬೆಳೆದಿಹ
ಗಿಡದ ಮೂಲಿಕೆ ಸಕಲ ಜೀವರ
ಒಡಲೊಳಿಪ್ಪಾಮಯವ ಪರಿಹರಗೈಸುವಂದದಲಿ
ಜಡಜಸಂಭವ ಜನಕ ತ್ರೈಜಗ
ದೊಡೆಯ ಸಂತೈಸೆನಲು ಅವರಿ
ದ್ದೆಡೆಗೆ ಬಂದೊದಗುವನು ಭಕ್ತರಭಿಡೆಯ ಮೀರದಲೆ ೨೫

ಶ್ರೀನಿಕೇತನ ತನ್ನವರ ದೇ
ಹಾನು ಬಂಧಿಗಳಂತೆ ಅವ್ಯವ
ಧಾನದಲಿ ನೆಲೆಸಿಪ್ಪ ಸರ್ವದ ಸರ್ವಕಾಮದನು
ಏನು ಕೊಟ್ಟುದ ಭುಂಜಿಸುತ ಮು
ಪ್ಪಾನೆಯಂದದಿ ಸಂಚರಿಸು ಮು
ತ್ತೇನು ಬೇಡದೆ ಭಜಿಸುತಿರು ಅವನಂಘ್ರಿ ಕಮಲಗಳ ೨೬

ಬೇಡದಲೆ ಕೊಡುತಿಪ್ಪ ಸುರರಿಗೆ
ಬೇಡಿದರೆ ಕೊಡುತಿಹನು ನರರಿಗೆ
ಬೇಡಿ ಬಳಲಲು ದೈತ್ಯರಿಗೆ ಕೊಡನೊಮ್ಮೆ ಪುರುಷಾರ್ಥ
ಮೂಢರನುದಿನ ಧರ್ಮ ಕರ್ಮವ
ಮಾಡಿದರು ಸರಿಯಹಿಕ ಫಲಗಳ
ನೀಡಿ ಉನ್ಮತ್ತರನು ಮಾಡಿ ಮಹಾನಿರಯವೀವ ೨೭

ತರಣಿ ಸರ್ವತ್ರದಲಿ ಕಿರಣವ
ಹರಹಿ ತತ್ತದ್ವಸ್ತುಗಳನನು
ಸರಿಸಿ ಅದರದರಂತೆ ಛಾಯನ ಕಂಗೊಳಿಪ ತೆರದಿ
ಅರಿಧರೇಜಾಸ್ಯಜ ಜಗದೊಳ
ಗಿರುವ ಛಾಯಾತಪನೆನಿಸಿ ಸಂ
ಕರುಷಣಾಹ್ವಯ ನವರವರ ಯೋಗ್ಯತೆಗಳಂತಿಪ್ಪ ೨೮

ಈ ವಿಧದಿ ಸರ್ವತ್ರ ಲಕುಮಿ
ಭೂವನಿತೆಯರ ಕೂಡಿ ತನ್ನ ಕ
ಳಾ ವಿಶೇಷಗಳಲ್ಲಿ ಕಡೆಯಲಿ ತುಂಬಿ ಸೇವ್ಯ ತವು
ಸೇವಕನು ತಾನೆನಿಸಿ ಮಾಯಾ
ದೇವಿರಮಣ ಪ್ರವಿಷ್ಟರೂಪಕ
ಸೇವೆಮಾಳ್ಪ ಶರಣ್ಯ ಶಾಶ್ವತ ಕರುಣಿ ಕಮಲಾಕ್ಷ ೨೯

ಪ್ರಣವ ಕಾರಣ ಕಾರ್ಯ ಪ್ರತಿಪಾ
ದ್ಯನು ಪರಾತ್ಪರ ಚೇತನಾಚೇ
ತನ ವಿಲಕ್ಷಣನಂತ ಸತ್ಕಲ್ಯಾಣ ಗುಣಪೂರ್ಣ
ಅನುಪಮನುಪಾಸಿತ ಗುಣೋದದಿ
ಯನಘನಜಿತಾನಂತ ನಿಷ್ಕಿಂ
ಚನ ಜನಪ್ರಿಯ ನಿರ್ವಿಕಾರ ನಿರಾಶ್ರಯಾವ್ಯಕ್ತ ೩೦

ಗೋಪನೀಯ ಭವಾಂಧಕಾರಕ
ದೀಪವಟ್ಟಿಗೆ ಸಕಲ ಸುಖಸದ
ನೋಪರಿಗ್ರಹವೆನಿಸುತಿಪ್ಪುದು ಹರಿಕಥಾಮೃತವು
ಗೋಪತಿ ಜಗನ್ನಾಥ ವಿಠಲ ಸ
ಮೀಪದಲಿ ನೆಲೆಸಿದ್ದು ಭಕ್ತರ
ನಾಪವರ್ಗರ ಮಾಡುವನು ಮಹದುಃಖ ಭವದಿಂದ ೩೧

ಅಂತು ಸಂಧಿ ೧೮ಕ್ಕೆ ಪದ್ಯಗಳು ೫೧೯॥ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

## ಸಂಧಿ ೧೯ "ಸ್ತೋತ್ರಪ್ರಕರಣ ಸಂಧಿ"

ಹರಿಃ ಓಂ.

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಮೂಲ ನಾರಾಯಣನು ಮಾಯಾ
ಲೋಲನಂತವತಾರನಾಮಕ
ವ್ಯಾಳರೂಪ ಜಯಾರಮಣನಾವೇಶ ನೆನಿಸುವನು
ಲೀಲೆಗೈವಾನಂತ ಚೇತನ
ಜಾಲದೊಳು ಪ್ರದ್ಯುಮ್ನ ಬ್ರಹ್ಮಾಂ
ಡಾಲಯದ ಒಳಹೊರಗೆ ನೆಲಸಿಹ ಶಾಂತಿಯನಿರುದ್ಧ ೧

ಐದು ಕಾರಣ ರೂಪ ವಿಪ್ರ
ತ್ರೈದು ಕಾರ್ಯಗಳೆನಿಸುವುವು ಆ
ರೈದು ರೂಪದಿ ರಮಿಸುತಿಪ್ಪನು ಈ ಚರಾಚರದಿ
ಭೇದವರ್ಜಿತ ಮೂಜಗಜ್ಜ
ನ್ಮಾದಿ ಕಾರಣ ಮುಕ್ತಿದಾಯಕ
ಸ್ವೋದರದೊಳಿಟ್ಟೆಲ್ಲರನು ಸಂತೈಪ ಸರ್ವಜ್ಞ ೨

ಕಾರ್ಯಕಾರಣ ಕರ್ತೃಗಳೊಳು ಸ್ವ
ಭಾರ್ಯರಿಂದೊಡಗೂಡಿ ಕಪಿಲಾ
ಚಾರ್ಯ ಕ್ರೀಡಿಸುತಿಪ್ಪ ತನ್ನೊಳು ತಾನೆ ಸ್ವೇಚ್ಛೆಯಲಿ
ಪ್ರೇರ್ಯನಲ್ಲ ರಮಾಬ್ಜಭವಭವ
ರಾರ್ಯ ರಕ್ಷಿಸಿ ಶಿಕ್ಷಿಸುವನು ಸ್ವ
ವೀರ್ಯದಿಂದಲಿ ದಿವಿಜದಾನವ ತತಿಯ ದಿನದಿನದಿ ೩

ಈ ಸಮಸ್ತ ಜಗತ್ತಿನೊಳಗಾ
ಕಾಶದೋಲಿರುತಿಪ್ಪ ವ್ಯಾಪ್ತಾ
ವೇಶವವತಾರಾಂತರಾತ್ಮಕನಾಗಿ ಪರಮಾತ್ಮ
ನಾಶರಹಿತ ಜಗತ್ತಿನೊಳಗವ
ಕಾಶವನು ತಾನಾಗಿ ಯೋಗೀ
ಶಾಶಯಸ್ಥಿತ ತನ್ನೊಳಿಲ್ಲಿರಸಿಟ್ಟು ಸಲಹುವನು ೪

ದಾರು ಪಾಷಾಣಗತ ಪಾವಕ
ಬೇರೆ ಬೇರಿಪ್ಪಂತೆ ಕಾರಣ
ಕಾರ್ಯಗಳ ಒಳಗಿದ್ದು ಕಾರಣ ಕಾರ್ಯವೆಂದೆನಿಸಿ
ತೋರಿಕೊಳ್ಳದಲೆಲ್ಲರೊಳು ವ್ಯಾ
ಪಾರ ಮಾಡುವ ಯೋಗ್ಯತೆಗಳನು
ಸಾರ ಫಲಗಳನಿತ್ತು ಸಂತೈಸುವ ಕೃಪಾಸಾಂದ್ರ ೫

ಊರ್ಮಿಗಳವೋಲಿಪ್ಪ ಕರ್ಮ ವಿ
ಕರ್ಮ ಜನ್ಯ ಫಲಾಫಲಂಗಳ
ನಿರ್ಮಲಾತ್ಮನು ಮಾಡಿ ಮಾಡಿಸಿ ಉಂಡುಣಿಸುತಿಪ್ಪ
ನಿರ್ಮಮ ನಿರಾಮಯ ನಿರಾಶ್ರಯ
ಧರ್ಮ ನಿಧ್ವರ್ಮಾತ್ಮ ಧರ್ಮಗ
ದುರ್ಮತೀ ಜನರೊಲ್ಲ ನಪ್ರತಿಮಲ್ಲ ಪ್ರೀನಜ್ಞ ೬

ಜಲದ ಬಡಬಾನಳಗಳಂಬುಧಿ
ಜಲವನುಂಬುವುದಬ್ದ ಮಳೆಗರೆ
ದಿಳೆಗೆ ಶಾಂತಿಯನೀವುದನಳನು ತಾನೆ ಭಂಜಿಪುದು
ತಿಳಿವುದೀಪರಿಯಲ್ಲಿ ಲಕುಮೀ
ನಿಲಯಗುಣ ಕೃತ ಕರ್ಮಜ ಫಲಾ
ಫಲಗಳುಂಡುಣಿಸುವನು ಸರ್ವಗ ಸರ್ವ ಜೀವರಿಗೆ ೭

ಪುಸ್ತಕಗಳವಲೋಕಿಸುತ ಮಂ
ತ್ರ ಸ್ತುತಿಗಳನಲೇನು ರವಿಯುದ
ಯಸ್ತಮನ ಪರಿಯಂತ ಜಪತಪನಮಾಡಿ ಫಲವೇನು
ಹೃಸ್ಥ ಪರಮಾತ್ಮನೆ ಸಮಸ್ತಾ
ವಸ್ಥೆಗಳೊಳಿದ್ದೆಲ್ಲರೊಳಗೆ ನಿ
ರಸ್ತಕಾಮನು ಮಾಡಿ ಮಾಡಿಪನೆಂದು ತಿಳಿಯದವ ೮

ಮದ್ಯಭಾಂಡವ ದೇವನದಿಯೊಳ
ಗದ್ದಿ ತೊಳೆಯಲು ನಿತ್ಯದಲಿ ಪರಿ
ಶುದ್ಧವಾಹುದೆ ಎಂದಿಗಾದರು ಹರಿಪದಾಬ್ಜಗಳ
ಬುದ್ಧಿಪೂರ್ವಕ ಭಜಿಸದವಗೆ ವಿ
ರುದ್ಧವೆನಿಸುವುವೆಲ್ಲ ಕರ್ಮ ಸ
ಮೃದ್ಧಿಗಳು ದುಃಖವನೆ ಕೊಡುತಿಹ ವಧಮ ಜೀವರಿಗೆ ೯

ಭಕ್ತಿಪೂರ್ವಕವಾಗಿ ಮುಕ್ತಾ
ಮುಕ್ತ ನಿಯಾಮಕನ ಸರ್ವೋ
ದ್ರಿಕ್ತ ಮಹಿಮೆಗಳನವರತ ಕೊಂಡಾಡು ಮರೆಯದಲೆ
ಸಕ್ತನಾಗದೆ ಲೋಕವಾರ್ತೆ ಪ್ರ
ಸಕ್ತಿಗಳ ನೀಡಾಡಿ ಶ್ರುತಿಸ್ಮೃ
ತ್ಯುಕ್ತ ಕರ್ಮವ ಮಾಡುತಿರು ಹರಿಯಾಜ್ಞೆಯೆಂದರಿದು ೧೦

ಲೋಪವಾದರು ಸರಿಯೆ ಕರ್ಮಜ
ಪಾಪಪುಣ್ಯಗಳೆರಡು ನಿನ್ನನು
ಲೇಪಿಸವು ನಿಷ್ಕಾಮಕನು ನೀನಾಗಿ ಮಾಡುತಿರೆ
ಶ್ರೌಪರಣಿ ವರವಹನು ನಿನ್ನ ಮ
ಹಾಪರಾಧಗಳೆಣಿಸದಲೆ ಸ್ವ
ರ್ಗಾಪವರ್ಗದೊಳಿಟ್ಟು ಸಲಹುವ ಸತತ ಸುಖಸಾಂದ್ರ ೧೧

ಸ್ವರತ ಸುಖಮಯ ಸುಲಭ ವಿಶ್ವಂ
ಭರ ವಿಶೋಕ ಸುರಾಸುರಾರ್ಚಿತ
ಚರಣಯುಗ ಚಾರ್ವಾಂಗ ಶಾರ್ಙ್ಗ ಶರಣ್ಯ ಚಿತ್ರಮತ್ಸ್ಯ
ಪರಮ ಸುಂದರತರ ಪರಾತ್ಪರ
ಶರಣಜನ ಸುರಧೇನು ಶಾಶ್ವತ
ಕರುಣಿ ಕಂಜದಳಾಕ್ಷ ಕಾಯೆನೆ ಕಂಗೊಳಿಪ ಸಿದ್ಧ ೧೨

ನಿರ್ಮಲನು ನೀನಾಗಿ ಕರ್ಮವಿ
ಕರ್ಮಗಳನು ನಿರಂತರದಲಿ ಸು
ಧರ್ಮನಾಮಕಗರ್ಪಿಸುತ ನಿಷ್ಕಲುಷ ನೀನಾಗು
ಭರ್ಮಗರ್ಭನ ಜನಕ ದಯದಲಿ
ದುರ್ಮತಿಗಳನು ಕೊಡದೆ ತನ್ನಯ
ಹರ್ಮ್ಯದೊಳಗಿಟ್ಟೆಲ್ಲ ಕಾಲದಿ ಕಾವ ಕೃಪೆಯಿಂದ ೧೩

ಕಲ್ಪ ಕಲ್ಪದಿ ಶರಣಜನ ವರ
ಕಲ್ಪವೃಕ್ಷನು ತನ್ನ ನಿಜಸಂ
ಕಲ್ಪದನುಸಾರದಲಿ ಕೊಡುತಿಪ್ಪನು ಫಲಾಫಲವ
ಅಲ್ಪ ಸುಖದಾಪೇಕ್ಷೆಯಿಂದಹಿ
ತಲ್ಪ ನಾರಾಧಿಸದಿರೆಂದಿಗು
ಶಿಲ್ಪಕನ ಕೈಸಿಲ್ಕಿದಾಶಿಲೆಯಂತೆ ಸಂತೈಪ ೧೪

ದೇಶಭೇದಾಕಾಶದಂದದಿ
ವಾಸುದೇವನು ಸರ್ವಭೂತನಿ
ವಾಸನೆನಿಸಿ ಚರಾಚರಾತ್ಮಕನೆಂದು ಕರೆಸುವನು
ದ್ವೇಷ ಸ್ನೇಹೋದಾಸಿನಗಳಿ
ಲ್ಲೀ ಶರೀರಗಳೊಳಗೆ ಅವರೋ
ಪಾಸನೆಗಳಂದದಲಿ ಫಲವೀವನು ಪರಬ್ರಹ್ಮ ೧೫

ಸಂಚಿತಾಗಾಮಿಗಳ ಕರ್ಮವಿ
ರಿಂಚಿ ಜನಕನ ಭಜಿಸೆ ಕೆಡುವವು
ಮಿಂಚಿನಂದದಿ ಪೊಳೆವ ಪುರುಷೋತ್ತಮ ಹೃದಾಂಬರದಿ
ವಂಚಿಸುವ ಜನರೊಲ್ಲ ಶ್ರೀವ
ತ್ಸಾಂಚಿತಸ್ವದ್ವಕ್ಷ ತಾ ನಿ
ಷ್ಕಿಂಚಜನ ಸುಪ್ರಿಯ ಸುರಮುನಿಗೇಯ ಶುಭಕಾಯ ೧೬

ಕಾಲದ್ರವ್ಯ ಸುಕರ್ಮ ಶುದ್ಧಿಯ
ಪೇಳುವರು ಅಲ್ಪರಿಗೆ ಇವು ನಿ
ರ್ಮೂಲಗೈಸುವವಲ್ಲ ಪಾಪಗಳೆಲ್ಲ ಕಾಲದಲಿ
ತೈಲಧಾರೆಯಂತವನ ಪದ
ವ್ಯಾಲಯಿಸಿ ತ ತಿಸದಲೆ ನಿತ್ಯದಿ
ಬಾಲಿಶರು ಕರ್ಮಾದಿಗಳೆ ತಾರಕವೆನುತಲಿಪುತಿಹರು ೧೭

ಕಮಲ ಸಂಭವ ಶರ್ವ ಶಕ್ರಾ
ದ್ಯಮರರೆಲ್ಲರು ಇವನ ದುರತಿ
ಕ್ರಮ ಮಹಿಮೆಗಳ ಮನವಚನದಿಂ ಪ್ರಾಂತಗಾಣದಲೆ
ಶ್ರಮಿತರಾಗಿ ಪದಾಬ್ಜ ಕಲ್ಪ
ದ್ರುಮನೆಳಲನಾಶ್ರಯಿಸಿ ಲಕ್ಷ್ಮೀ
ರಮಣ ಸಂತೈಸೆಂದು ಪ್ರಾರ್ಥಿಪರತಿ ಭಕುತಿಯಿಂದ ೧೮

ವಾರಿಚರವೆನಿಸುವುವು ದರ್ದುರ
ತಾರಕೆಗಳೆಂದರಿದು ಭೇಕವ
ನೇರಿ ಜಲಧಿಯ ದಾಟುವೆನು ಎಂಬುವನ ತೆರನಂತೆ
ತಾರತಮ್ಯ ಜ್ಞಾನ ಶೂನ್ಯರು
ಸೂರಿಗಮ್ಯನ ತಿಳಿಯಲರಿಯದೆ
ಸೌರ ಶೈವಮತಾನುಗರನನುಸರಿಸಿ ಕೆಡುತಿಹರು ೧೯

ಕ್ಷೋಣಿಪತಿಸುತನೆನಿಸಿ ಕೈದು
ಗ್ಗಾಣಿಗೊಡ್ಡುವ ತೆರದಿ ಸುಮನಸ
ಧೇನು ಮನೆಯೊಳಗಿರಲು ಗೋಮಯ ಬಯಸುವಂದದಲಿ
ವೇಣುಗಾನ ಪ್ರಿಯನಹಿತ ಸು
ಖಾನುಭವ ಬೇಡದಲೆ ಲಕ ಮೀ
ಪ್ರಾಣನಾಥನ ಪಾದಭಕುತಿಯ ಬೇಡು ಕೊಂಡಾಡು ೨೦

ಉದಯವ್ಯಾಪಿನಿ ದರ್ಶ ಪೌರ್ಣಿಮ
ವಧಿಕಯಾನುವು ಶ್ರವಣ ವಭಿಜಿತು
ಸದನವೈದಿರ ಮಾಳ್ಪತೆರದಂದದಲಿ ಹರಿಸೇವೆ
ವಿಧಿ ನಿಷೇಧಗಳೇನು ನೋಡದೆ
ವಿಧಿಸುತಿರು ನಿತ್ಯವಲಿ ತನ್ನಯ
ಸದನವೊಳಗ್ಗೊಂಬಿಟ್ಟು ಸಲಹುವ ಭಕ್ತವತ್ಸಲನು ೨೧

ನಂದಿವಾಹನ ರಾತ್ರಿ ಸಾಧನೆ
ಬಂದ ದ್ವಾದಶಿ ದಶಮಿ ಪೈತ್ಯಕ
ಸಂಧಿಸಿಹ ಸಮಯದಲಿ ಶ್ರವಣವ ತ್ಯಜಿಸುವಂತೆ ಸದಾ
ನಿಂದೆಯಿಂದಲಿ ಬಂದ ದ್ರವ್ಯವ
ಕಂವೆರೆದು ನೋಡದಲೆ ಶ್ರೀಮದಾ
ನಂದ ತೀರ್ಥಾಂತರ್ಗತನ ಸರ್ವತ್ರ ಭಜಿಸುತಿರು ೨೨

ಶ್ರೀಮನೋರಮ ಮೇರು ತ್ರಿಕಕು
ದ್ಧಾಮ ಸತ್ಕಲ್ಯಾಣಗುಣ ನಿ
ಸ್ಸೀಮ ಪಾವನನಾಮ ದಿವಿಜೋದ್ಧಾಮ ರಘುರಾಮ
ಪ್ರೇಮಪೂರ್ವಕ ನಿತ್ಯ ತನ್ನ ಮ
ಹಾಮಹಿಮೆಗಳ ತುತಿಸುವರಿಗೆ ಸು
ಧಾಮಗೊಲಿದಂದದಲಿ ಅಖಿಳಾರ್ಥಗಳ ಕೊಡುತಿಪ್ಪ ೨೩

ತಂದೆ ತಾಯ್ಗಳ ಕುರುಹನರಿಯದ
ಕಂದ ದೇಶಾಂತರದೊಳಗೆ ತ
ನ್ನಂದದಲಿ ಇಪ್ಪವರ ಜನನೀಜನಕರನು ಕಂಡು
ಹಿಂದೆ ಎನ್ನನು ಪಡೆದವರು ಇವ
ರೆಂದವಲ್ಲಿಪ್ಪರಲ ನಾನವ
ರೆಂದು ಕಾಣುವೆನೆನುತ ಹುಡುಕುವ ತೆರದಿ ಕೋವಿದರು ೨೪

ಶ್ರುತಿಪುರಾಣ ಸಮೂಹದೊಳು ಭಾ
ರತ ಪ್ರತಿಪ್ರತಿ ಪದಗಳೊಳು ಸಿ
ರ್ಜಿತನ ಗುಣರೂಪಗಳ ಪುಡುಕುತ ಪರಮ ಹರುಷದಲಿ
ಮತಿಯುತರು ಪ್ರತಿದಿವಸ ಸಾರ
ಸ್ವತ ಸಮುದ್ರದಿ ಶಫರಿಯಂದದಿ
ಸತತ ಸಂಚರಿಸುವರು ಕಾಣುವ ಲವಲವಿಕೆಯಿಂದ ೨೫

ಮತ್ಸ್ಯಕೇತನ ಜನಕ ಹರಿ ಶ್ರೀ
ವತ್ಸಲಾಂಛನ ನಿಜ ಶರಣ ಜನ
ವತ್ಸಲವರಾರೋಹ ವೈಕುಂಠಾಲಯ ನಿವಾಸಿ
ಚಿತ್ಸುಖಪ್ರದ ಸಲಹೆನಲು ಗೋ
ವತ್ಸ ಧ್ವನಿಗೊದಗುವತೆರದಿ ಪರ
ಮೋತ್ಸಹದಿ ಬಂದೊದಗುವನು ನಿರ್ಮತ್ಸರರ ಬಳಿಗೆ ೨೬

ಸೂರಿಗಳಿಗೆ ಸಮೀಪಗ ದುರಾ
ಚಾರಿಗಳಿಗೆಂದೆಂದು ದೂರಾ
ದ್ದೂರತರ ದುರ್ಲಭನೆನಿಸುವನು ದೈತ್ಯಸಂತತಿಗೆ
ಸಾರಿ ಸಾರಿಗೆ ನೆನೆವವರ ಸಂ
ಸಾರವೆಂಬ ಮಹೋರಗಕೆ ಸ
ರ್ಪಾರಿಯೆನಿಸಿ ಸದಾ ಸುಸೌಖ್ಯವನೀವ ಸುಜನರಿಗೆ ೨೭

ಜ್ಞಾನಜ್ಞೇಯ ಜ್ಞಾತೃಯೆಂಬಭಿ
ಧಾನದಿಂ ಬುದ್ಧ್ಯಾದಿಗಳಧಿ
ಷ್ಠಾನದಲಿ ನೆಲೆಸಿಪ್ಪ ಕರಣಗತ ತತ್ತ್ವದಾಹ್ವಯದಿ
ಭಾನುಮಂಡಲಗ ಪ್ರದರ್ಶಕ
ತಾನೆನಿಸಿ ವಶವಾಗುವನು ಶುಕ
ಶೌನಕಾದಿ ಮುನೀಂದ್ರ ಹೃದಯಾಕಾಶ ಗತಚಂದ್ರ ೨೮

ಕ್ಷುಧೆಯಗೋಸುಗ ಪೋಗಿ ಕಾನನ
ಬದರಿ ಫಲಗಳಪೇಕ್ಷೆಯಿಂದಲಿ
ಪೊದೆಯೊಳಗೆ ಸಿಗಬಿದ್ದು ಬಾಯ್ದೆರೆದವನ ತೆರದಂತೆ
ವಿದಿತ ಪಿತನ ಪೂಜಿಸದ ನಿಜ ಸು
ಉದರಕೋಸುಗ ನಾಥಲಿಂಗ
ಪ್ರದರ್ಶಿಕರಾದರ ನುತ ಬಳಲುವರು ಜನದೊಳಗೆ ೨೯

ಚಕ್ರ ಶಂಖಗದಾಬ್ಜಧರ ದುರ
ತಿಕ್ರಮ ಪರಮಾಣು ವಿಭು ಶಿವ
ಶಕ್ರ ಸೂರ್ಯಾದ್ಯಮರ ಪೂಜ್ಯಪದಾಬ್ಜ ನಿರ್ಲಜ್ಜ
ಶುಕ್ರಶಿಷ್ಯನ ಅಶ್ವಮೇಧ
ಪ್ರಕ್ರಿಯವ ಕಡಿಸಲ್ಕೆ ಬಂದವನ
ತ್ರಿಕ್ರಮಿಸಿ ಜಾಹ್ನವಿಯ ಪಡೆದ ತ್ರಿವಿಕ್ರಮಾಹ್ವಯನು ೩೦

ಶಕ್ತರೆನಿಸುವರಿಲ್ಲ ಹರಿವ್ಯತಿ
ರಿಕ್ತ ಸುರಗಣದೊಳಗೆ ಸರ್ವೋ
ದ್ರಿಕ್ತನೆನಿಸುವ ಸರ್ವರಿಂದಲಿ ಸರ್ವಕಾಲದಲಿ
ಭಕ್ತಿಪೂರ್ವಕವಾಗಿ ಅನ್ಯ ಪ್ರ
ಸಕ್ತಿಗಳ ನೀಡ್ಯಾಡಿ ಪರಮಾ
ಸಕ್ತನಾಗಿರು ಹರಿಕಥಾಮೃತಪಾನ ವಿಷಯದಲಿ ೩೧

ಪ್ರಣತಕಾಮದ ಭಕ್ತ ಚಿಂತಾ
ಮಣಿ ಮಣಿಮಯಾಭರಣ ಭೂಷಿತ
ಫ್ರಣಿ ಗುಣತ್ರಯ ದೂರವರ್ಜಿತ ಗಹನ ಸನ್ಮಹಿಮ
ಎಣಿಸಭಕ್ತರ ದೋಷಗಳ ಕುಂ
ಭಿಣಿಜೆಯಾಣ್ಮ ಶರಣ್ಯ ರಾಮಾ
ರ್ಪಣವೆನಲು ಕೈಕೊಂಡ ಶಬರಿಯ ಫಲವ ಪರಮಾತ್ಮ ೩೨

ಬಲ್ಲೆನೆಂಬುವರಿಲ್ಲ ನೀತನ
ನೊಲ್ಲೆನೆಂಬುವರಿಲ್ಲ ಲೋಕದೊ
ಳಿಲ್ಲದಿಹ ಸ್ಥಳವಿಲ್ಲವೈ ಯಜ್ಞಾತಜನರಿಲ್ಲ
ಜೆಲ್ಲದಚ್ಚಿನ ಬೊಂಬೆಯಂದದ
ಲೆಲ್ಲರೊಳಗಿರುತಿಪ್ಪ ಶ್ರೀ ಪೂ
ನಲ್ಲಗಿವಗೆಣೆಯಿಲ್ಲ ವಸ್ತ್ರತಿವ ಲ್ಲ ಜಗಕೆಲ್ಲ ೩೩

ಶಬ್ದಗೋಚರ ಶಾರ್ಙಧರ ಕರ
ನಬ್ದವಾಹನನನುಜ ಯದುವಂ
ಶಾಬ್ಧಿ ಚಂದ್ರಮನಿರುಪಮ ಸುನಿಸ್ಸೀಮ ಸಮಿತಸನು
ಲಬ್ಧವಾಗುವ ತನ್ನವಗೆ ಪ್ರಾ
ರಬ್ಧ ಕರ್ಮಗಳುಣಿಸಿ ತೀವ್ರದಿ
ಕ್ಷುಬ್ಧ ಪಾವಕನಂತೆ ಬಿಡದಿಪ್ಪನು ದಯಾಸಾಂದ್ರ ೩೪

ಶ್ರೀವಿರಿಂಚಾದ್ಯಮರ ವಂದಿತ
ನೀ ವಸುಂಧರೆಯೊಳಗೆ ದೇವಕಿ
ದೇವಿ ಜಠರದೊಳವತರಿಸಿದನು ಅಜನು ಜನದಂತೆ
ರೇವತೀರಮಣಾನುಜನು ನೃಪ
ದಾವಲಂಬಿಗಳನು ಸಲಹಿ ದೈ
ತ್ಯಾವಳಿಯ ಸಂಹರಿಸಿದ ಜಗನ್ನಾಥ ವಿಠಲನು ೩೫

ಅಂತು ಸಂಧಿ ೧೯ಕ್ಕೆ ಪದ್ಯಗಳು ೫೫೦ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

## ಸಂಧಿ ೨೦ "ಗುಣತಾರತಮ್ಯ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದ ನಾದರದಿ ಕೇಳುವುದು ಪ

ಶ್ರೀಧರಾದುರ್ಗಾಮನೋರಮ
ವೇಧಮುಖ ಸುಮನಸಗಣ ಸಮಾ
ರಾಧಿತ ಪದಾಂಭೋಜ ಜಗದಂತರ್ಬಹಿರ್ವ್ಯಾಪ್ತ
ಗೋಧರಫಣಾವರಾತಪತ್ರ ನಿ
ಷೇಧದೋಷ ವಿಚಿತ್ರ ಕರ್ಮ ಸು
ಬೋಧ ಸುಖಮಯಗಾತ್ರ ಪರಮ ಪವಿತ್ರ ಸುಚರಿತ್ರ ೧

ನಿತ್ಯ ನಿರ್ಮಲ ನಿಗಮವೇದ್ಯೋ
ತ್ಪತ್ತಿ ಸ್ಥಿತಿಲಯ ದೂರವರ್ಜಿತ
ಸ್ತುತ್ಯ ಪೂಜ್ಯಪ್ರಸಿದ್ಧ ಮುಕ್ತಾಮುಕ್ತಗಣ ಸೇವ್ಯ
ಸತ್ಯಕಾಮ ಶರಣ್ಯ ಶಾಶ್ವತ
ಭೃತ್ಯವತ್ಸಲ ಭಯನಿವಾರಣ
ಅತ್ಯಧಿಕ ಸಂಪ್ರಿಯತಮ ಜಗನ್ನಾಥ ಮಾಂಪಾಹಿ ೨

ಪರಮಪುರುಷನ ರೂಪ ಗುಣವನು
ಸರಿಸಿಕಾಂಬಳು ಪ್ರವಹದಂದದಿ
ನಿರುಪಮಳು ನಿರ್ದುಃಖ ಸುಖಸಂಪೂರ್ಣಳೆನಿಸುವಳು
ಹರಿಗೆ ಧಾಮತ್ರಯವೆನಿಸಿ ಆ
ಭರಣ ವಸನಾಯುಧಗಳಾಗಿ
ದ್ವರಿಗಳನು ಸಂಹರಿಸುವಳು ಅಕ್ಷರಳೆನಿಸಿಕೊಂಡು ೩

ಈತಗಿಂತಾನಂತ ಗುಣದಲಿ
ಶ್ರೀ ತರುಣಿ ತಾಂ ಕಡಮೆಯೆನಿಸಳು
ನೀತಮುಕ್ತಳು ನಿರ್ವಿಕಾರಳು ತ್ರಿಗುಣ ವರ್ಜಿತಳು
ಧೌತಪಾಪೆ ವಿರಿಂಚಪವನರ
ಮಾತೆಯೆನಿಸ ಮಹಾಲಕುಮಿ ನಿ
ಖ್ಯಾತಳಾಗಿಹಳಲ್ಲಕಾಲದಿ ಶ್ರುತಿ ಪುರಾಣದೊಳು ೪

ಕಮಲಸಂಭವ ಪವನರೀರ್ವರು
ಸಮರು ನೆಮವರ್ತಿಗಳು ರುದ್ರಾ
ದ್ಯಮರಗಣ ಸಂಸೇವಿತರುಬ್ರಹ್ಮನಾಮಕರು
ಭಾಮುಖರಿಗೆ ಮಹಲಕುಮಿ ತಾನು
ತ್ತಮಳು ಕೋಟಿ ಸಜಾತಿಗ ಗಣದಿಂ
ದಮಿತ ಸವಿಜಾತ್ಯಗಣರೆನಿಪರು ಬ್ರಹ್ಮವಾಯುಗಳು ೫

ಪತಿಗಳಿಂದ ಸರಸ್ವತೀ ಭಾ
ರತಿಗಳಧಮರು ನೂರುಗುಣ ಪರಿ
ಮಿತ ವಿಜಾತ್ಯವರರುಬಲ ಜ್ಞಾನಾದಿ ಗುಣದಿಂದ
ಅತಿಶಯಳು ವಾಗ್ದೇವಿ ಶ್ರೀ ಭಾ
ರತಿಗೆ ಪದದ ಪ್ರಯುಕ್ತ ವಿಧಿ ಮಾ
ರುತರ ಪೋಲ್ವಿಂತಿಪ್ಪುದು ಸದ್ಭಕ್ತಿಯುಳಿ ಕೋವಿದರು ೬

ಖಗಪ ಫಣಿಪತಿಮೃಡರು ಸಮವಾ
ಣಿಗೆ ಶತಗುಣಾಧಮರು ಮೂವ
ರ್ಗಿಗಿಲೆನಿಸುವನು ಶೇಷಪದದಿಂದಲಿ ತ್ರಿಯಂಬಕಗೆ
ನಗಧರನ ಷಣ್ಮಹಿಷಿಯರು ಪ
ನ್ನಗ ವಿಭೂಷಣಗಿಂತ ಮೇನಕೆ
ಮಗಳು ವಾರುಣಿ ಸೌಪರಣಿಗಳಿಗಧಿಕವೆರಡುಗುಣ ೭

ಗರುಡಶೇಷ ಮಹೇಶರಿಗ ಸೌ
ಪರಣಿ ವಾರುಣಿ ಪಾರ್ವತಿಯು ಮೂ
ವರು ದಶಾಧಮ ವಾರುಣಿಗೆ ಕಡಮೆನಿಸ ವಳು ಗೌರಿ
ಪರಸ ಮಡದಿಗೆ ಹತ್ತುಗುಣದಲಿ
ಸುರಪಕಾಮರು ಕಡಮೆ ಇಂದ್ರಗೆ
ಕೊರತೆಯೆನಿಸುವ ಮನ್ಮಥನು ಪದದಿಂದಲಾವಾಗ ೮

ಈರಸುದು ಗುಣಕಡಮೆಯಾಹಂ
ಕಾರಿಕ ಪ್ರಾಣನು ಮನೋಜನ
ಗಾರಿಗಳಿಗನಿರುದ್ಧರತಿ ಮನುದಕ್ಷ ಗುರುಶಚಿಯು
ಆರುಜನಸಮ ಪ್ರಾಣನಿಂದಲಿ
ಹೌರನಸಿಪರು ಹತ್ತು ಗುಣದಲಿ
ಮಾರುತಾದ್ಯಂಗ್ಯದು ಗುಣಹೀನಮಷ್ಟ್ರಪಹಾಖ್ಯ ೯

ಗುಣತ್ರಯ ಗಳಿಂ ಕಡಮೆ ಪ್ರವಹಗೆ
ಇನಶಶಾಂಕ ಯಮಸ್ವಾಯಂಭುವ
ಮನುಮಡದಿ ಶತರೂಪ ನಾಲ್ವರು ಪಾದ ಪಾದಾರ್ಧ
ವನಧಿ ನೀಚಪದಾರ್ಧ ನಾರದ
ಮುನಿಗೆ ಭೃಗ್ವಾಗ್ನಿ ಪ್ರಸೂತಿಗ
ಳೆನಿಸುವರು ಪಾದಾರ್ಧ ಗುಣದಿಂದಧಮರಹುದೆಂದು ೧೦

ಹುತವಹಗೆ ದ್ವಿಗುಣಾಧಮರು ವಿಧಿ
ಸುತ ಮರೀಚ್ಯಾದಿಗಳು ವೈವ
ಸ್ವತನು ವಿಶ್ವಾಮಿತ್ರರಿಗೆ ಕಿಂಚಿದ್ಗುಣಾಧಮರು
ಪ್ರತಿವರ ಜಗನ್ಮಿತ್ರವರನಿ
ರುತಿಯು ಪ್ರಾವಹಿತಾರರಿಗೆ ಕಿಂ
ಚಿತು ಗುಣಾಧಮಧನಪ ವಿಷ್ವಕ್ಸೇನರೆನಿಸುವರು ೧೧

ಧನಪ ವಿಷ್ವಕ್ಸೇನ ಗೌರೀ
ತನಯರಿಗೆ ಉಕ್ತೇತರರು ಸಮ
ರೆನಿಸುವರು ಎಂಭತ್ತೈದು ಜನ ಶೇಷ ಶತರೆಂದು
ದಿನಪರಾರೇಳಧಿಕ ನಾಲ್ವ
ತ್ತನಿಳ ರೇಳ್ವಸುರುದ್ರರೀರ್ವೈ
ದನಿತು ವಿಶ್ವೇದೇವ ಋಭುವಶ್ವಿನಿ *ಪಿತುರು ಧರಣಿ ೧೨

ಇವರಿಗಿಂತಲಿ ಕೊರತೆಯೆನಿಪರು
ಚ್ಯವನ ಸನಕಾದಿಗಳು ಪಾವಕ
ಕವಿಯುಚಿಥ್ಯಜಯಂತ ಕಶ್ಯಪ ಮನುಗಳೇಕದಶ
ಧ್ರುವನಹುಷ ಶಶಿಬಿಂದು ಹೈಹಯ
ಧವಷಯಂತಿ ವಿರೋಚನನ ನಿಜ
ಕುವರ ಬಲಿ ಮೊದಲಾದ ಸಪ್ತೇಂದ್ರರು ಕಕುಸ್ಥಗಯ ೧೩

ಪೃಥುಭರತ ಮಾಂಧಾತ ಪ್ರಿಯ
ವ್ರತ ಮರುತ ಪ್ರಹ್ಲಾದ ಸುಪರೀ
ಕ್ಷಿತ ಹರಿಶ್ಚಂದ್ರಾಂಬರೀಷೋತ್ತಾನಪಾದಮುಖ
ಶತಸುಪುಣ್ಯಶ್ಲೋಕರು ಗದಾ
ಭೃತಗದಿಷ್ಟಾನರು ಸುಪ್ರಿಯ
ವ್ರತಗೆ ದ್ವಿಗುಣಾಧಮರು ಕರ್ಮಜರೆಂದು ಕರೆಸುವರು ೧೪

ನಳಿನಿ ಸಂಜ್ಞಾರೋಹಿಣೀ ಶಾ
ಮಲ ವಿರಾಟ್ಪರ್ಜನ್ಯರಧಮರು
ಎಲರನಿತ್ರನಮಡದಿ ದ್ವಿಗುಣಾಧಮಳು ಬಾಂಬೊಳಗೆ
ಜಲಮಯ ಬುಧಾಧಮನು ದ್ವಿಗುಣದಿ
ಕೆಳಗೆನಿಸುವ ರುಷಾಶನೈಶ್ಚರ
ರಿಳೆಗೆ ಈರುಗುಣಾಧಮರುಷಾದೇಪಿ ದೆಸೆಯಿಂದ ೧೫

*ಪಿತುರು = ಪಿತೃ

ಎರಡುಗುಣ ಕರ್ಮಾಧಿಪತಿ ಪು
ಷ್ಕರ ಕಡಮೆಯಾಜಾನ ದಿವಿಜರು
ಚಿರಪಿತೃಗಳಿಂದುತ್ತಮರು ಕಿಂಕರರು ಪುಷ್ಕರಗೆ
ಸುರಪನಾಲಯ ಗಾಯಕೋತ್ತಮ
ರೆರಡಯಿದು ಗುಣದಿಂದಧಮತುಂ
ಬುರಗೆ ಸಮನವಕೋಟಿ ಋಷಿಗಳು ನೂರು ಜನರುಳಿದು ೧೬

ಅವರವರ ಪತ್ನಿಯರು ಅಪ್ಸರ
ಯುವತಿಯರು ಸಮವುತ್ತಮರನುಳಿ
ದವರರನಿಪರು ಮನುಜ ಗಂಧರ್ವರು ದ್ವಿಷಡ್ಗುಣದಿ
ಕುವಲಯಾಧಿಪರೀರಯಿದು ಗುಣ
ಪವನಿಪರ ಸ್ತ್ರೀಯರು ದಶೋತ್ತರ
ನವತಿ ಗುಣದಿಂದಧಮರೆನಿಪರು ಮಾನುಷೋತ್ತಮರು ೧೭

ಸತ್ವ ಸತ್ವರು ಸತ್ವರಾಜಸ
ಸತ್ವ ತಾಮಸ ಮೂವರೂ ರಜ
ಸತ್ವರಧಿಕಾರಿಗಳು ಭಗವದ್ಭಕ್ತರೆನಿಸುವರು
ನಿತ್ಯಬದ್ಧ ರಜೋರಜರು ಉ
ತ್ಪತ್ತಿ ಭೂಸ್ವರ್ಗದೊಳು ನರಕದಿ
ಪೃಥ್ವಿಯೊಳು ಸಂಚರಿಸುತಿಪ್ಪರು ರಜಸ್ತಾಮಸರು ೧೮

ತಮಸು ಸಾತ್ವಿಕರೆನಿಸಿಕೊಂಬರು
ಅಮಿತನಾಮಾತ್ಯಸುರಗಣವುರೆ
ತಮಸ ರಾಜಸವೆನಿಸಿಕೊಂಬುದು ದೈತ್ಯಸಮುದಾಯ
ತಮಸು ತಾಮಸ ಕಲಿಪುರಂಧ್ರಿಯು
ಅಮಿತ ದುರ್ಗುಣ ಪೂರ್ಣ ಸರ್ವಾ
ಧಮರೊಳಧಮಾಧಮ ದುರಾತ್ಮನು ಕಲಿಯೆನಿಸಿಕೊಂಬ ೧೯

ಇವನ ಪೋಲುವ ಪಾಪಿ ಜೀವರು
ಭುವನ ಮೂರರೊಳಿಲ್ಲ ನೋಡಲು
ನವವಿಧ ದ್ವೇಷಗಳಿಗಾಕರನೆನಿಸಿಕೊಳುತಿಪ್ಪ
ಬವರದಲಿ ಬಂಗಾರದಲಿ ನಟ
ಯುವತಿದ್ಯೂತಾಪೇಯ ವೃಷದಲಿ
ಕವಿಸಿ ಮೋಹಿಸಿ ಕೆಡಿಸುವನು ಎಂದರಿದು ತ್ಯಜಿಸುವುದು ೨೦

ತ್ರಿವಿಧಜೀವ ಪ್ರತತಿಗಳ ಸ
ಗ್ಗವೊಳಯಾಹ್ಮಾಲಯನು ನಿರ್ಮಿಸಿ
ಯುವತಿಯರ ಒಡಗೂಡಿ ಕ್ರೀಡಿಸುವನು ಕೃಪಾಸಾಂದ್ರ
ದಿವಿಜ ದಾನವ ತಾರತಮ್ಯದ
ವಿವರ ತಿಳಿವ ಮಹಾತ್ಮರಿಗ ಬಾ
ನ್ನವಿರಸಖ ತಾನೊಲಿದು ಉದ್ಧರಿಸುವನು ಭವದಿಂದ ೨೧

ದೇವದೈತ್ಯರ ತಾರತಮ್ಯವು
ಪಾವಮಾನಿ ಮತಾನುಗರಿಗಿದು
ಕೇವಲಾವಶ್ಯಕವು ತಿಳಿವುದು ಸರ್ವಕಾಲದಲಿ
ದಾವಶಿಖಿ ಪಾಪಾಟವಿಗೆ ನವ
ನಾವೆಯೆನಿಪುದು ಭವಸಮುದ್ರಕೆ
ಪಾವಟಿಗ ವೈಕುಂಠ ಲೋಕಕಿದೆಂದು ಕರೆಸುವುದು ೨೨

ತಾರತಮ್ಯ ಜ್ಞಾನಮುಕ್ತಿ
ದ್ವಾರವೆನಿಪುದು ಭಕ್ತಜನರಿಗೆ
ತೋರಿ ಪೇಳಿ ಸುಖಾಬ್ಧಿಯೊಳು ಲೋಲ್ಯಾಡುವುದು ಬುಧರು
ಕ್ರೂರ ಮಾನವರಿಗಿದು ಕರ್ಣಕ
ಠೋರವೆನಿಪುದು ನಿತ್ಯದಲಿ ಅಧ
ಕಾರಿಗಳಿಗಿದನರುಪುವುದು ದುಸ್ತರ್ಕಗಳ ಬಿಟ್ಟು ೨೩

ಹರಿಶಿರಿ ವಿರಂಚೀರ ಭಾರತಿ
ಗರುಡ ಫಣಿಪತಿ ಷಣ್ಮಹಿಷಿಯರು
ಗಿರಿಜೆ ನಾಕೇಶಸ್ಮರ ಪ್ರಾಣಾನಿರುದ್ಧ ಶಚಿ
ಗುರು ರತೀ ಮನು ದಕ್ಷ ಪ್ರವಹಾ
ಮರುತ ಮಾನವಿ ಯಮ ಶಶಿ ದಿವಾ
ಕರ ವರುಣ ನಾರದ ಸುರಾಸ್ಯ ಪ್ರಸೂತಿ ಭೃಗುಮುನಿಪ ೨೪

ವ್ರತತಿಜಾಸನ ಪುತ್ರರೆನಿಸುವ
ವ್ರತಿವರತ್ರಿ ಮರೀಚಿ ವೈವ
ಸ್ವತನು ತಾರಾಮಿತ್ರನಿರ್ಋತಿ ಪ್ರವಹ ಮಾರುತನ
ಸತಿಧನೇಶಾಶ್ವಿನಿಗಳಂಗಣ
ಪತಿಯು ವಿಷ್ವಕ್ಸೇನ ಶೇಷ ಸು
ಶತರು ಮುನಿಗಳು ಚಿದ್ಯಚ್ಯವನ ಮುನಿಗಳಿಗೆ ನಮಿಪೆ ೨೫

ಶತಸುಪುಣ್ಯಶ್ಲೋಕರೆನಿಸುವ
ಕ್ಷಿತಿಪರಿಗೆ ನಮಿಸುವೆನು ಭಾಗೀ
ರಥಿ ವಿರಾಟ್ಪರ್ಜನ್ಯ ರೋಹಿಣಿ ಶ್ಯಾಮಲಾ ಸಂಜ್ಞಾ
ಹುತವಹನ ಮಹಿಳಾಂಬು ಘೋಷಾ
ಕ್ಷಿತಿಶನೈಶ್ಚರ ಪುಷ್ಕರರಿಗಾ
ನತಿಸಿ ಬಿನ್ನೈಸುವೆನು ಭಕ್ತಿ ಜ್ಞಾನನಿಯಲೆಂದು ೨೬

ನೂರಧಿಕವಾಗಿಪ್ಪ ಮತ್ತ್ಹದಿ
ನಾರು ಸಾವಿರ ನಂದಗೋಪ ಕು
ಮಾರನರ್ಧಾಂಗಿಯರಗಸ್ತ್ಯಾದಿಕ ಮುನೀಶ್ವರರು
ಊರ್ವಶಿಯೆ ಮೊದಲಾದ ಅಪ್ಸರ
ನಾರಿಯರು ಶತತುಂಬುರರು ಕಂ
ಸಾರಿ ಗುಣಗಳ ಕೀರ್ತನೆಯ ಮಾಡಿಸಲಿ ಎನ್ನಿಂದ ೨೭

ಪಾವನರು ಶುಚಿಶುದ್ಧ ನಾಮಕ
ದೇವತೆಗಳಾಜಾನ ಚಿರ ಪಿತೃ
ದೇವನರ ಗಂಧರ್ವರವನಿಪ ಮಾನುಷೋತ್ತಮರು
ಈ ವಸುಮತಿಯೊಳುಳ್ಳ ವೈಷ್ಣವ
ರಾವಳಿಯೊಳಿಹರೆಂದು ನಿತ್ಯದಿ
ಸೇವಿಪುದು ಸಂತೋಷದಿಂ ಸರ್ವಪ್ರಕಾರದಲಿ ೨೮

ಮಾನುಷೋತ್ತಮರನು ಹಿಡಿದು ಚತು
ರಾನನಾಂತ ಶತೋತ್ತಮತ್ವ ಕ್ರ
ಮೇಣ ಚಿಂತಿಪ ಭಕ್ತರಿಗೆ ಚತುರವಿಧ ಪುರುಷಾರ್ಥ
ಶ್ರೀನಿಧಿ ಜಗನ್ನಾಥ ವಿಠ್ಠಲ
ತಾನೆ ಒಲಿದೀವನು ನಿರಂತರ
ಸಾನುರಾಗದಿ ಪಠಿಸುವುದ ಪ್ರಾಜ್ಞರಿದ ಮರೆಯದಲೆ ೨೯

ಅಂತು ಸಂಧಿ ೨೦ಕ್ಕೆ ಪದ್ಯಗಳು ೬೯೯ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

---

## ಸಂಧಿ ೨೧ "ಆವೇಶಅವತಾರಬೃಹತ್ತಾರತಮ್ಯ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಹರಿ ಸಿರಿ ವಿರಂಚೀರ ಮುಖ ನಿ
ರ್ಜರರ ಆವೇಶಾವತಾರಗಳ
ಸ್ಮರಿಸು ಗುಣಗಣ ಸರ್ವಕಾಲದಿ ಭಕ್ತಿಪೂರ್ವಕದಿ ।ಸಂಧಿ ಸೂಚನೆ।

ಮೀನ ಕೂರ್ಮಕ್ರೋಢ ನರಹರಿ
ಮಾಣವಕ ಭೃಗುರಾಮ ದಶರಥ
ಸೂನು ಯಾದವ ಬುದ್ಧ ಕಲ್ಕೀ ಕಪಿಲ ವೈಕುಂಠ
ಶ್ರೀನಿವಾಸವ್ಯಾಸ ಋಷಭ ಹ
ಯಾನನಾ ನಾರಾಯಣೀ ಹಂ
ಸಾನಿರುದ್ಧ ತ್ರಿವಿಕ್ರಮ ಶ್ರೀಧರ ಹೃಷಿಕೇಶ ೧

ಹರಿಯು ನಾರಾಯಣನು
ಸುರ ಕುಲಾಂತಕ ಸೂರ್ಯ ಸಪ್ರಭ
ಕರಸುವನು ನಿರ್ದುಷ್ಟ ಸುಖ ಪರಿಪೂರ್ಣ ತಾನೆಂದು
ಸರುವ ದೇವೋತ್ತಮನು ಸರ್ವಗ
ಪರಮ ಪುರುಷ ಪುರಾತನ ಜರಾ
ಮರಣವರ್ಜಿತ ವಾಸುದೇವಾದ್ಯಮಿತ ರೂಪಾತ್ಮ ೨

ಈ ನಳಿನಭವ ಜನನಿ ಲಕುಮಿಯು
ಜ್ಞಾನಬಲ ಭಕ್ತ್ಯಾದಿ ಗುಣ ಸಂ
ಪೂರ್ಣಳೆನಿಪಳು ಸರ್ವಕಾಲದಿ ಹರಿ ಕೃಪಾಬಲದಿ
ಹೀನಳೆನಿಪಳನಂತಗುಣದಿ ಪು
ರಾಣ ಪುರುಷಗೆ ಪ್ರಕೃತಿಗಿನ್ನು ಸ
ಮಾನರೆನಿಸುವರಿಲ್ಲ ಮುಕ್ತಾಮುಕ್ತ ಸುರರೊಳಗೆ ೩

ಗುಣಗಳತ್ರಯಮಾನಿ ಶ್ರೀ ಕುಂ
ಭಿಣಿ ಮಹಾದುರ್ಗಾಂಭೃಣೀ ರು
ಗ್ಮಿಣಿಯು ಸತ್ಯಾ ಶಾಂತಿ ಕೃತಿ ಜಯಮಾಯೆ ಮಹಲಕುಮಿ
ಜನಕಜಾ ಕಮಲಾಲಯಾನ
ಕ್ಷಿಣೆಯು ಪದ್ಮಾ ತ್ರಿಲೋಕೇಶ್ವರಿ
ಯಣುಮಹತ್ತಿನೊಳಿದ್ದು ಉಪಮಾರಹಿತಳೆನಿಸುವಳು ೪

ಘೋಟಕಾಸ್ಯನ ಮಡದಿಗಿಂದಲಿ
ಹಾಟಕೋದರ ಪವನರೀರ್ವರು
ಕೋಟಿ ಗುಣದಿಂದಧಮರೆನಿಸುವರಾವಕಾಲದಲಿ
ಖೇಟಪತಿ ಶೇಷಾಮರೇಂದ್ರರ
ಕಾಟಮಾಡದೆ ಶ್ರೀಶನ ಕೃಪಾ
ನೋಟದಿಂದಲಿ ಸರ್ವರೊಳು ವ್ಯಾಪ ರಮಾಡುವರು ೫

ಪುರುಷಬ್ರಹ್ಮ ವಿರಿಂಚಿಯು ಮಹಾ
ನ್ಮರುತ ಮುಖ್ಯಪ್ರಾಣ ಧೃತಿಸ್ಮೃತಿ
ಗುರುವರ ಮಹಾಧ್ಯಾತ ಬಲವಿಜ್ಞಾತ ವಿಖ್ಯಾತ
ಗರಳ ಭುಗ್ಭವರೋಗಭೇಷಜ
ಸ್ವರವರಣ ವೇದಸ್ಥ ಜೀವೇ
ಶ್ವರ ವಿಭೀಷಣ ವಿಶ್ವ ಚೇಷ್ಟಕ ವೀತಭಯ ಭೀಮ ೬

ಅನಿಳಸ್ಥಿತಿ ವೈರಾಗ್ಯನಿಧಿ ರೋ
ಚನ ವಿಮುಕ್ತಿಗನಂದ ದಶಮತಿ
ಯನಿಮಿಷೇಶಾನಿದ್ರಶುಚಿ ಸತ್ವಾತ್ಮಕ ಶರೀರ
ಅಣುಮಹದ್ರೂಪಾತ್ಮಕಾಮೃತ
ಹನುಮದಾದ್ಯವತಾರ ಪದ್ಮಾ
ಸನಪದವಿ ಸಂಪ್ರಾಪ್ತಪಡಿಸುವ ಆಖಣಾಶ್ಮಸಮ ೭

ಮಾತರಿಶ್ವ ಬ್ರಹ್ಮರು ಜಗ
ನ್ಮಾತೆಗಧಮಾಧೀನರೆನಿಪರು
ಪ್ರೀತಪಣಿವಲ್ಲಭನು ಈರ್ವರೂ ಸಾವಕಾಲದಲಿ
ನೀತ ಭಕ್ತಿಜ್ಞಾನ ಬಲರೂ
ಪಾತಿಶಯದಿಂದಿದ್ದು ಚೇತನ
ಚೇತನಗಳೊಳು ವ್ಯಾಪ್ತನೆನಿಸುವ ತತ್ತ್ವದಾಹ್ವಯದಿ ೮

ಸರಸವತಿ ವೇದಾತ್ಮಿಕಾ ಪಾಜೆ
ಸರಹರಿ ಗುರುಭಕ್ತಿ ಬ್ರಾಹ್ಮಿ
ಪರಮ ಸುಖಬಲ ಪೂರ್ಣೆ ಶ್ರದ್ಧಾ ಪ್ರೀತಿ ಗಾಯತ್ರಿ
ಗರುಡಶೇಷರ ಜನನಿ ಶ್ರೀ ಸಂ
ಕರುಷಣ ಜಯಾತನುಜೆ ವಾಣೀ
ಕರಣಿ ನಿಯಾಮಕೆ ಚತುರ್ದಶ ಭುವನ ಸನ್ಮಾನ್ಯೆ ೯

ಕಾಳಿ ದ್ರೌಪದಿ ಕಾಶಿಜಾ ಪಾಂ
ಚಾಲಿ ಶಿವ ಕನ್ಯೇಂದ್ರ ಸೇನಾ
ಕಾಲ ಮಾನೀ ಚಂದ್ರೆ ದ್ಯುಸಭಾ ನಾಮ ಭಾರತಿಗೆ
ಗಾಳಿ ಬ್ರಹ್ಮರ ಯುವತಿಯರು ಏ
ಳೇಳು ಐವತ್ತೊಂದು ಗುಣದಿಂ
ಕೀಳರೆನಿಪರು ತಮ್ಮ ಪತಿಗಳಿಗಿಂದಲಾವಾಗ ೧೦

ಹರಿಸಮೀರಾವೇಶ ನರಸಂ
ಕರುಷಣಾವೇಶಯುತ ಲಕ್ಷ್ಮಣ
ಪರಮ ಪುರುಷನ ಶುಕ್ಲಕೇಶಾವೇಶ ಬಲರಾಮ
ಹರ ಸದಾಶಿವ ತಪವಹಂಕೃತು
ಮರುತಯುಕ್ತ ಶುಕೋರ್ಧ್ವಪಟ ತ
ತ್ಪುರುಷ ಜಯುಗೀಶ್ವರ್ವ ದ್ರೋಣೀ ವ್ಯಾಧದೂರ್ವಾಸ ೧೧

ಗರುಡ ಶೇಷ ಶಶಾಂಕದಳ ಶೇ
ಖರರು ತಮ್ಮೊಳು ಸಮರು ಭಾರತಿ
ಸರಸಿಜಾಸನ ಪತ್ನಿಗಧಮರು ನೂರು ಗುಣದಿಂದ
ಹರಿಮಡದಿ ಜಾಂಬವತಿಯೊಳು ಶ್ರೀ
ತರುಣಿಯಾವೇಶವಿಹುದೆಂದಿಗು
ಕೊರತೆಯೆನಿಪರು ಗರುಡ ಶೇಷರಿಗೈವರ್ದುಗುಣ ೧೨

ನೀಲೆ ಭದ್ರಾಮಿತ್ರವಿಂದಾ
ನೀಲೆನಿಪ ಕಾಳಿಂದಿ ಲಕ್ಷಣೆ
ಬಾಲೆಯರಿಗಾದಧಮ ವಾರುಣಿ ಸೌಪರಣಿ ಗಿರಿಜೆ
ಶ್ರೀ ಲಕುಮಿಯುತೆ ರೇವತೀ ಸಿರಿ
ಮೂಲರೂಪದಿ ಪ್ರಿಯಳೆನಿಪಳು
ಶೈಲಜಾದ್ಯರು ದಶಗುಣಾಧಮ ತಮ್ಮ ಪತಿಗಳಿಗೆ ೧೩

ನರಹರೀರಾವೇಶ ಸಂಯುತ
ನರ ಪುರಂದರ ಗಾಧಿ ಕುಶ ಮಂ
ದರ ದ್ಯುಮನನು ವಿಕುಕ್ಷಿ ವಾಲೀ ಇಂದ್ರನವತಾರ
ಭರತ ಬ್ರಹ್ಮಾವಿಷ್ಟ ಸಾಂಬ ಸು
ದರಿಶಿನ ಪ್ರದ್ಯುಮ್ನ ಸನಕಾ
ದ್ಯರೊಳಗಿಪ್ಪ ಸನತ್ಕುಮಾರನು ಷಣ್ಮುಖನು ಕಾಮ ೧೪

ಈರಯಿದುಗುಣ ಕಡಮೆ ಪಾರ್ವತಿ
ವಾರುಣೀಯರಿಗಿಂದ್ರ ಕಾಮ ಶ
ರೀರ ಮಾನಿ ಪ್ರಾಣ ದಶಗುಣವವರ ಶಕ್ರನಿಗೆ
ಮಾರುಜನು ರತಿ ದಕ್ಷ ಗುರು ವೃ
ತ್ರಾರಿ ಜಾಯಾಶಚಿ ಸ್ವಯಂಭುವ
ರಾರುಜನ ಸಮಪ್ರಾಣಗವರರು ಹತ್ತುಗುಣದಿಂದ ೧೫

ಕಾಮ ಪುತ್ರನಿರುದ್ಧ ಸೀತಾ
ರಾಮನನುಜನು ಶತ್ರುಹನ ಬಲ
ರಾಮನನುಜನ ಪೌತ್ರನನಿರುದ್ಧನೊಳಗನಿರುದ್ಧ
ಕಾಮ ಭಾರ್ಯೆಯು ರುಗ್ಮವತಿ ಸ
ನ್ನಾಮ ಲಕ್ಷಣೆ ಎನಿಸುವಳು ಪೌ
ಲೋಮಿ ಚಿತ್ರಾಂಗದೆಯು ತಾರಾವರಡು ಪೆಸರುಗಳು ೧೬

ತಾರನಾಮಕ ತ್ರೇತಯೊಳು ಸೀ
ತಾರಮಣನಾರಾಧಿಸಿದನು ಸ
ಮೀರ ಯುಕ್ತೋದ್ಧವನು ಕೃಷ್ಣಗೆ ಪ್ರಿಯನೆನಿಸಿದನು
ವಾರಿಜಾಸನ ಯುಕ್ತದ್ರೋಣನು
ಮೂರು ಇಳೆಯೊಳು ಬೃಹಸ್ಪತಿಗವ
ತಾರವೆಂಬರು ಮಹಾಭಾರತ ತಾತ್ಪರಿಯದೊಳಗೆ ೧೭

ಮನು ಮುಖಾದ್ಯರಿಗಿಂದ ಪ್ರವಹನು
ಗುಣಗಳದ್ವಯ ನೀಚನೆನಿಸುವ
ನಿನ ಶಶಾಂಕರು ಧರ್ಮಮಾನವಿಯೆರಡು ಗುಣದಿಂದ
ಕನಿಯರೆನಿಪರು ಪ್ರವಹಗಿಂದಲಿ
ದಿನಪ ಶಶಿಯನು ಧರ್ಮರೂಪಗ
ಳನುದಿನದಿ ಚಿಂತಿಪುದು ಸಂತರು ಸರ್ವಕಾಲದಲಿ ೧೮

ಮರುತ ನಾವೇಶಯುತ ಧರ್ಮಜ
ಕರಡಿ ವಿದುರನು ಸತ್ಯಜಿತು ವೀ
ರೆರಡು ಧರ್ಮನರೂಪ ಬ್ರಹ್ಮಾವಿಷ್ಟ ಸುಗ್ರೀವ
ಹರಿಯ ರೂಪಾವಿಷ್ಟ ಕರ್ಣನು
ತರಣಿಗೆರಡವತಾರ ಚಂದ್ರಮ
ಸುರಪ ನಾವೇಶಯುತ ನಂಗದನೆನಿಸಿಕೊಳುತಿಪ್ಪ ೧೯

ತರಣಿಗಿಂದಲ ಪಾದ ಪಾದರೆ
ವರುಣ ಕ್ಷೀಚ ಮಹಾಭಿಷಗ್ವರ
ಮರು ಸುಷೇಣನು ಶಂತನುಂನಾಲ್ವರು ವರುಣರೂಪ
ಸುರಮುನಿಯು ನಾರದನು ಕಿಂಚಿತು
ಕೊರತೆ ವರುಣನಿಗಗ್ನಿ ಭೃಗು ವಜ
ಗೊರಳ ಪತ್ನಿ ಪ್ರಸೂತಿ ಮೂವನಾರದಸಿಗಧನು ೨೦

ನೀಲ ಧೃಷ್ಟದ್ಯುಮ್ನ ಲವ ಈ
ಶೀಲಿಹಾನನ ರೂಪಗಳು ಭೃಗು
ಕಾಲಿಲೊದ್ದುದರಿಂದ ಹರಿಯನು ವ್ಯಾಧನೆನಿಸಿದನು
ಏಳು ಋಷಿಗಳಿಗುತ್ತಮರು ಮುನಿ
ಮೌಳಿ ನಾರದಗಧಮ ಮೂವರು
ಗಾಳಿಯುತ ಪ್ರಹ್ಲಾದ ಬಾಹ್ಲಿಕರಾಜನೆನಿಸಿದನು ೨೧

ಜನಪ ಕರ್ಮಜರೊಳಗೆ ನಾರದ
ಮುನಿಯನುಗ್ರಹಬಲದಿ ಪ್ರಹ್ಲಾ
ದ ನಳ ಭೃಗುಮುನಿ ದಕ್ಷಪತ್ನಿಗೆ ಸಮನೆನಿಸಿಕೊಂಬ
ಮನು ವಿವಸ್ವಾನ್ಗಾಧಿ ಜೀವರ್ಗರು
ಮನಸಳಗಿಂದಲಿ ಕಿಂಚಿತಾಧಮ
ರೆಣೆಯೆನಿಸುವರು ಸಪ್ತಋಷಿಗಳಿಗೆಲ್ಲ ಕಾಲದಲಿ ೨೨

ಕಮಲ ಸಂಭವಭವರೆನಿಸ ಸಂ
ಯಮಿ ಮರೀಚಿಯು ಅತ್ರಿಯಂಗಿರ
ಸುಮತಿ ಪುಲಹನು ಕ್ರತು ವಶಿಷ್ಠ ಪುಲಸ್ತ್ಯಮುನಿಸ್ವಾಹಾ
ರಮಣಗಧಮರು ಪಿತೃನಾಮಕ
ದ್ಯುಮಣಿ ರಾಹು ಸುಯುಕ್ತ ಭೀಷ್ಮಕ
ಯಮನ ರೂಪನು ತಾರನಾಮಕನೆನಿಪ ತ್ರಿತಯೊಳು ೨೩

ನಿರತಿಗೆರಡವತಾರ ದಮವಾ
ಹರಯುತ ಘಟೋತ್ಕಚನು ಪ್ರಾವಹಿ
ಗುರುಮಡದಿ ತಾರಾಸಮರು ಪರ್ಜನ್ಯಗುತ್ತಮರು
ಕರಿಗೊರಳ ಸಂಯುಕ್ತ ಭಗಾದ
ತ್ತರ ಸುಕತ್ತನ ಧನಪ ರೂಪಗ
ಳರಡು ವಿಘ್ನಪ ಚಾರುದೇಷ್ಣರು ಅಶ್ವಿನಿಗಳು ಸಮ ೨೪

ದ್ರೋಣ ಧ್ರುವ ದೋಷಾರ್ಕನಗ್ನಿ
ಪ್ರಾಣ ದ್ಯುವಿಭಾವಸುಗಳೆಂಟು ಕ
ಶಾನು ಶ್ರೀಪ್ರದ್ಯುಮ್ನ ಸುಭೀಷ್ಮಾರ್ಯರ ಬ್ರಹ್ಮಯುತ
ದ್ರೋಣನಾಮಕನಂದಗೋಪ ಪ್ರ
ಧಾನ ಅಗ್ನಿಯನುಳಿದು ಏಳು ಸ
ಮಾನರೆನಿಪರು ತಮ್ಮೊಳಗ ಜ್ಞಾನಾದಿಗುಣದಿಂದ ೨೫

ಭೀಮ ರೈವತನೋಜಕಪ
ದಾಪರ್ಹ ಬಹುರೂಪಕನು ಭವ
ನಾಮನುಗ್ರ ವೃಷಾಕಪಿಯಹಿರ್ಬುಧ್ನ್ಯ ಎನುತಿಪ್ಪ
ಈ ಮಹಾತ್ಮರ ಮಧ್ಯದೊಳಗೆ ಉ
ಮಾಮನೋಹರನುತ್ತಮನು ದಶ
ನಾಮಕರು ಸಮರೆನಿಸಿಕೊಂಬರು ತಮ್ಮೊಳೆಂದೆಂದು ೨೬

ಭೂರ್ಯರ್ಜ್ಯೈಕ ಪದಾಹ್ವಹಿರ್ಬು
ಧ್ನೀರಯಿವು ರುದ್ರಗಣ ಸಂಯುತ
ಭೂರಿಶ್ರವನೆಂದೆನಿಪಶಲನಿರುಪಾಕ್ಷ ನಾಮಕನು
ಷೂರಿಕೃಪ ನಿಷ್ಕಂಭನಪವೆ
ವಾರಣಾಗ್ರಣಿ ಸೋಮದತ್ತನು
ತಾ ರಚಿಸಿದ ವ್ಯರೂಪ ಧರೆಯೊಳು ಪತ್ರತಾಪಕನು ೧೭

ದೇವತಪ [illegible]ನುರುಕ್ರಮನು [illegible]
ತ್ರಾವರಣ ಪರ್ಜನ್ಯ ಭಗಸ್ಥ
ಷಾ [illegible]ವನ್ಸ್ವ ಸವಿತೃಧಾತಾ ಅರ್ಯಮನುತ್ವಷ್ಟ
ದೇವಕೀ ಸುತನಪ್ಪ ನ[illegible]
ಭಾವಸೂನುತ [illegible]ನ [illegible]ನಿಸುವ
ಜೀವನಯುತ [illegible] ಕೃಷ್ಟ [illegible]ನಾಮಕನು ೧೮

ಎರಡಧಿಕ ದಶ ಸೂರ್ಯರೊಳು ಪೂ
ರರಡು ಜನರುತ್ತಮರು ವಿವಸ್ವಾನ್
ವರುಣ ಶಕ್ರನುರುಕ್ರಮನು ಪರ್ಜನ್ಯ ಮಿತ್ರಾಖ್ಯ
ಮರುತ ನಾವೇಶಯುತ ಪಾಂಡುವು
ವರ ಪರಾಹವನೆಂದೆನಿಪ ಕೇ
ಸರಿಮೃಗಪ ಸಂಪಾತಿ ಶ್ವೇತತ್ರಯರು ಮರುದಂಶ ೧೯

ಪ್ರತಿಭವಾತನು ಚೇಕಿತನು ವಿ
ಪೃಥುವೆನಿಸುವನು ಸೌಮ್ಯಮಾರುತ
ವಿತತ ಶರ್ವೋತ್ತುಂಗ ಗಜನಾಮಕರು ಪ್ರಾಣಾಂಶ
ದ್ವಿತಿಯಪಾನ ಗವಾಕ್ಷ ಗವಯು
ತ್ರಿತಿಯ ವ್ಯಾನ ಉದಾನ ವೃಷಪ
ವರ್ತುಳ ಶರ್ವತ್ರಾತ ಗಂಧ ಸುಮಾದನರು ಸಮನ ೨೦

ಐವರೊಳಗಿಂ ಕುಂತಿಭೋಜರು
ಆನೆ ನಾಮಕನಾಗ ಕೃಕಲರು
ದೇವದತ್ತ ಧನಂಜಯರು ಅವತಾರವರ್ಜಿತರು
ಆವಹೋದ್ವಹ ವಿವಹ ಸಂವಹ
ಪ್ರಾವಹೇಪತಿ ಮರುತ ಪ್ರವಹ ನಿ
ಗಾವಕಾಲಕೆ ಕಿಂಚಿತಧಮರು ಮರುತ ಗಣವೆಲ್ಲ ೩೧

ಪ್ರಾಣಪಾನವ್ಯಾನುದಾನ ಸ
ಮಾನ ರೈವರಸ್ತುದ ಮರುತರು
ಊನರೆನಿಪರು ಹತ್ತು ನಿಕ್ಷೇ ದೇವರವರಿಂದ
ಸೂನಗಳು ಎನಿಸುವರು ಐವರ
ಮಾನಿನೀ ದ್ರೌಪದಿಗೆ ಕಲವರು
ಕ್ಷೋಣಿಯೊಳು ಕೃಕೇಯ ರನಿಸರು ಎಲ್ಲಕಾಲದಲಿ ೩೨

ಪ್ರತಿವಿಂಧ್ಯ ಶ್ರುತಸೋಮ ಶ್ರುತಕೀ
ರುತಿ ಶತಾನಿಕ ಶ್ರುತಕರ್ಮ ದ್ರೌ
ಪದಿ ಕುವರರಿವರೊಳಗೆ ಅಘತಾಮ್ರ ಪ್ರಮುಖ ಚಿತ್ರ
ರಥನು ಗೋಸಕಿಶೋರ ಬಲಿರಂ
ಬತುಳರ್ಕ ಗಂಧರ್ವರಿಂದಲಿ
ಯುತರು ಧರ್ಮ ವೃಕೋದರಾದಿಗಳೆಂದು ಕರಸುವರು ೩೩

ವಿವಿದ ವೈಂದರು ನಕುಲ ಸಹದೇ
ವರಿಹರು ತ್ರಿಶಿಖಾಶ್ವಿನಿಗಳಲಿ
ದಿವಿಜ ನಾವೇಶನಿಹುದೆಂದಿಗು ದ್ಯಾವಪೃಥ್ವಿ ವಿಭು
ಪವನಸುತ ನಿಷ್ಟ್ರಕ ಸೇನನು ಮೆ
ಕುವರ ವಿಷ್ಕ್ವಪ ಧನಪ ಮೊದಲಾ
ದವರು ಮಿತ್ರಗೆ ಕಿಂಚಿತಾಧಮರೆನಿಸಿ ಕೊಳುತಿಹರು ೩೪

ಪಾವಕಾಗ್ನಿ ಕುಮಾರನೆನಿಸುವ
ಚ್ಯಾವನ ಉಚಿಥ್ಯಮುನಿ ಚಾಕ್ಷುಷ
ರೈವತ ಸ್ವಾರೋಚಿಷೋತ್ತಮ ಬ್ರಹ್ಮರುದ್ರೇಂದ್ರ
ದೇವಧರ್ಮ ಸುದಕ್ಷನಾಮಕ
ಸಾವರಣಿ ಶಶಿಬಿಂದು ಪೃಥು ಪ್ರಿ
ಯವ್ರತನು ಮಾಂಧಾತ ಗಯ ನು ಕಕುತ್ಸ್ಥ ದೌಷ್ಯಂತಿ ೩೭

ಭರತ ಹರಿಣಜ ಋಷಭ ದ್ವಿಜ
ಭರತ ಮೊದಲಾದಖಿಳ ರಾಯರೊ
ಳಿರುತಿಹುದು ಶ್ರೀವಿಷ್ಣು ಪ್ರಾಣಾವೇಶ ಪ್ರತಿದಿನದಿ
ವರ ದಿವಸ್ಪತಿ ಶಂಭು ಅದ್ಭುತ
ಕರೆಸುವನು ಬಲಿವಿಧೃತ ಧೃತ ಶುಚಿ
ನೆರೆ ಋತುಕೃತಧಾಮ ನಾಮಲಾದಷ್ಟ ಗಂಧರ್ವ ೩೮

ಅರಸೆನಿಪ ಕರ್ಮಜರು ವೈಶ್ವಾ
ನರಗಧಮ ಶತಗುಣದಿ ವಿಘ್ನೇ
ಶ್ವರಗೆ ಕಿಂಚಿದ್ಗುಣ ಕಡಮೆ ಬಳಿಕಾಶ್ವಿ ಪಾವಕರು
ಶರಭ ಪರ್ಜನ್ಯಾಖ್ಯ ಮೋಘಸ
ತರಣಿ ಛಾಯಾಸಂಜ್ಞೆ ಶಾರ್ವರಿ
ಕರನ ಪತ್ನಿಯು ರೋಹಿಣೀ ಶಾಮಲೆಯು ದೇವಕಿಯು ೩೯

ಅರಸಿ ಯೆನಿಸಿಪಳು ಧರ್ಮರಾಜಗೆ
ವರುಣ ಭಾರ್ಯೋಷಾದಿ ಷಟ್ಕರು
ಕೊರತೆಯೆನಿಪರು ಪಾವಕಾದ್ಯರಿಗೆರಡು ಗುಣದಿಂದ
ಎರಡು ಮೂರ್ಜನರಧಮ ಸ್ವಾಹಾ
ಕರೆಸುವಳುಷಾದೇವಿ ವೈಶ್ವಾ
ನರನ ಮಡದಿಗೆ ದಶಗುಣಾವರಳಶ್ವಿನೀ ಭಾರ್ಯೆ ೪೦

ಸುದರುಶನ ಶಕ್ರಾದಿ ಸುರಯುತ
ಬಾಧನು ತಾನಭಿಮನ್ಯುವೆನಿಸುವ
ಬುಧನಿಗಿಂವಪ್ಪಿನಿಯು ಭಾರ್ಯೆಯು ಶಲ್ಯನಾಗಧರ
ಉದರ ಜೋಷಾದೇವಿಯಿಂದಲಿ
ಅಧಮನೆನಿಪ ಶನೈಶ್ಚರನು ಶನಿ
ಗಧಮ ಪುಷ್ಕರ ಕರ್ಮಪನು ಎನಿಸುವನು ಬುಧರಿಂದ ೩೯

ಉದ್ವಹಾ ಮರುತಾನ್ವಿತ ವಿರಾ
ಧ ದ್ವಿತಿಯ ಸಂಜಯನು ತುಂಬುರು
ವಿದ್ವದುತ್ತಮ ಜನಮೆಜಯ ತ್ವಷ್ಟ್ರಯುತ ಚಿತ್ರರಥ
ಸದ್ವಿನುತ ದಮಘೋಷಕ ಕಬಂ
ಧ ದ್ವಯರು ಗಂಧರ್ವ ದನುಮನು
ಪದ್ಮನಂದನಯುತಾಕೂರಕಿರಾರನೆನಿಸುವನು ೪೦

ವಾಯುಯುತ ಧೃತರಾಷ್ಟ್ರ ದಿವಿಜರ
ನಾಯಕನು ಧೃತರಾಷ್ಟ್ರನಕ್ರನು
ರಾಯ ದೃಪದನವಹ ವಿಶಿಷ್ಟನು ಹೂಹು ಗಂಧವ-
ನಾಯಕ ವಿರಾಡ್ವಿವಹಯುತ ಹಹ
ಗೇಯ ವಿದ್ಯಾಧರನೆ ಅಜಗರ
ತಾಯೆನಿಸುವನು ಉಗ್ರಸೇನನೆ ಉಗ್ರಸೇನಾಖ್ಯ ೪೧

ಬಿಸಜ ಸಂಭವಯುಕ್ತ ವಿಶ್ವಾ
ವಸು ಯುಧಾಮನ್ಯುತ್ತಮೌಜಸ
ಬಿಸಜ ಮಿತ್ರಾರ್ಯಮಯುತ ಪರಾವಸು ಎನಿಸುತಿಪ್ಪ
ಅಸಮ ಮಿತ್ರಾನ್ವಿತ ಸತ್ಯಜಿತು
ವಸುಧೆಯೊಳು ಚಿತ್ರಸೇನನ್ಯುತಾಂ
ಧಸರ ಗಾಯಕನೆಂದು ಕರೆಸುವರಾವಕಾಲದಲಿ ೪೨

ಉಳಿದ ಗಂಧರ್ವರುಗಳೆಲ್ಲರು
ಬಲಿಮೊದಲು ಗೋಪಾಲರೆನಿಪರು
ಇಳೆಯೊಳಗೆ ಸೈರಂಧ್ರಿ ಪಿಂಗಳಯುಪ್ಸರಸ್ತ್ರೀಯಳು
ತಿಲಉತಮಿ ಪೂರ್ವವಲಿ ನಕುಲನ
ಲಲನೆ ಪಾರ್ವತಿಯೆನಿಸುವಳು ಗೋ
ಕುಲದ ಗೋಪಿಯರಲ್ಲಿ ಶಬರೀ ಮುಖ್ಯರಪ್ಸರರು ೪೩

ಕೃಷ್ಣವರ್ತ್ಮನಸುತರೊಳಗೆ ಶತ
ದ್ವ್ಯಷ್ಟನಾನಿರ ಸ್ತ್ರೀಯರಲ್ಲಿ ಪ್ರ
ನಿಷ್ಟಳಾಗಿ ರಮಾಂಬೆ ತತ್ತನ್ನಾಮ ರೂಪದಲಿ
ಕೃಷ್ಣ ಮಹಿಷಿಯರೊಳಗೆ ಇಪ್ಪಳು
ತ್ವಷ್ಟ್ರಪುತ್ರಿಕಶೇರು ಇವರೊಳ
ಶ್ರೇಷ್ಠಳೆನಿಸುವಳು ಉಳಿದ ಋಷಿಗಣ ಗೋಪಿಕಾಜನರು ೪೪

ಸೂನುಗಳು ಎನಿಸುವರು ದೇವಕೃ
ಶಾನುವಿಗೆ ಕ್ರತುಸಿಂಧು ರುಚಿಪವ
ಮಾನಕೌಶಿಕರೈದು ತುಂಬುರು ಊರ್ವಶೀಶತರು
ಮೇನಕಾ ಋಷಿರಾಯರುಗಳಾ
ಜಾನ ಸುರರಿಗೆ ಸಮರೆನಿಪರು ಸು
ರಾಣಕರ ಸಾಖ್ಯಾತ ದಿವಿಜರ ಜನಕರೆನಿಸುವರು ೪೫

ಪಾವಕರಿಗಿಂದಧಮರೆನಿಸುವ
ದೇವಕುಲಜಾಸಾಖ್ಯ ಸುರಗಣ
ಕೋವಿದರು ನಾನಾ ಸುವಿದ್ಯದಿ ಸ್ತೋತ್ರಮರನಿತ್ಯ
ಸೇವಿಪರು ಸದ್ಭಕ್ತಿ ಪೂರ್ವಕ
ಸ್ಥಾವರರಿಗುಪದೇಶಿಸುವರು ನಿ
ರಾವಲಂಬನ ವಿಮಲಗುಣಗಳ ಪ್ರತಿದಿವಸದಲ್ಲ ೪೬

ಇವರು ಮುಕುತಿಗೆ ಯೋಗ್ಯರೆಂಬರು
ಶ್ರವಣ ಮನನಾದಿಗಳ ಪರಮೋ
ತ್ಸವದಿ ಮಾಡುತ ಕೇಳಿ ನಲಿಯುತ ಧರ್ಮಕಾಮಾರ್ಥ
ತ್ರಿವಿಧ ಫಲಗಳಪೇಕ್ಷಿಸದೆ ಶ್ರೀ
ಪವನಮುಖ ದೇವಾಂತರಾತ್ಮಕ
ಪ್ರವರತಮ ತಿಷ್ಟೇಷ್ಟದಾಯಕನೆಂದು ಸ್ಮರಿಸುವರು ॥೧

ನಿತ್ಯ ಸಂಸಾರಿಗಳು ಗುಣದೋ
ಷಾತ್ಮಕರು ಬ್ರಹ್ಮಾದಿ ಜೀವರ
ಭೃತ್ಯರೆಂಬರು ರಾಜಸೋಪಾದಿಯಲಿ ಹರಿಯೆಂಬ
ಕೃತ್ತಿವಾಸ ಬ್ರಹ್ಮ ಶ್ರೀ ವಿ
ಷ್ಣುತ್ರಯರು ಸಮದುಃಖ ಸುಖ ಉ
ತ್ಪತ್ತಿ ಮೃತಿಭಯ ಪೇಳುವರು ಅವತಾರಗಳಿಗೆ ಸದಾ ॥೨

ತಾರತಮ್ಯ ಜ್ಞಾನವಿಲ್ಲದೆ
ಸೂರಿಗಳ ನಿಂದಿಸುತ ನಿತ್ಯದಿ
ತೋರುತಿಪ್ಪರು ಸುಜನರೋಪಾದಿಯಲಿ ನರರೊಳಗೆ
ಕ್ರೂರ ಕರ್ಮಾಸಕ್ತರಾಗಿ ಶ
ರೀರ ಪೋಷಣೆಗೋಸುಗದಿ ಸಂ
ಚಾರಮಾಳ್ಪರು ಅನ್ಯದೇವತೆ ನೀಚರಾಲಯದಿ ॥೩

ದಶಪ್ರಮತಿಯ ಮತಾಬ್ಧಿಯೊಳು ಸುಮ
ನಸರನಿಪ ರತ್ನಗಳನವಲೋ
ಕಿಸಿ ತೆಗೆದು ಪ್ರಾಕೃತ ಸುಭಾಷಾತಂತ್ರಗಳ ರಚಿಸಿ
ಅನುಪತಿ ಶ್ರೀರಮಣಗೆ ಸಮ
ರ್ಪಿಸಿದೆ ಸಜ್ಜನರಿದನು ಸಂತೋ
ಷಿಸಲಿ ದೋಷಗಳೆಣಿಸದಲೆ ಕಾರುಣ್ಯದಲಿ ನಿತ್ಯ ॥೪

ನಿರುಪಮನು ಶ್ರೀವಿಷ್ಣು ಲಕುಮಿಯು
ಸರಸಿಜೋದ್ಭವ ವಾಯುವಾಣೀ
ಗರುಡ ಷಣ್ಮಹಿಷಿಯರು ಪಾರ್ವತಿಶಕ್ರಸ್ಮರ ಪ್ರಾಣ
ಗುರುಬೃಹಸ್ಪತಿ ಪ್ರವಹಸೂರ್ಯನು
ವರುಣನಾರದ ವಹ್ನಿ ಸಪ್ತಾಂ
ಗಿರರು ಮಿತ್ರಗಣೇಶ ಪೃಥುಗಂಗಾನ್ವಹಾ ಬುಧನು ೨೪

ತರಣಿತನಯ ಶನೈಶ್ಚರನು ಪು
ಷ್ಕರನಜಾನಜ ಚಿರಪಿತರು ಗಂ
ಧರುವರೀರ್ವರು ದೇವಮಾನುಷ ಚಕ್ರವರ್ತಿಗಳು
ನರರೊಳುತ್ತಮ ಮುಘ್ನನಾಧನು
ಕರಸುವರು ಪಥೋತ್ತಮರು ಈ
ರೆಡುಜನ ಕೈವಲ್ಯಮಾರ್ಗನ ರಂದಾಸವಿವೆ ೨೫

ಸಾರಭಕ್ತಿಜ್ಞಾನದಿ ಬೃಹ
ತ್ತಾರತಮ್ಯವನರಿತು ಪಠಿಸುವ
ಸೂರಿಗಳಿಗನುದಿನದಿ ಪುರುಷಾರ್ಥಗಳ ಪ್ರೇರ್ಕಿಸಿ
ಕಾರುಣಿಕ ಪುರುತಾಂತರಾತ್ಮಕ
ಮಾರರಮಣ ಜಗನ್ನಾಥ ವಿಠ್ಠಲ
ತೋರಿಕೊಂಬನು ಹೃತ್ಕಮಲದೊಳು ಯೋಗ್ಯತೆಗಳರಿತು ೨೬

ಅಂತು ಸಂಧಿ ೨೧ಕ್ಕೆ ಪದ್ಯಗಳು ೬೨೬ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

---

*

## ಸಂಧಿ ೨೨. "ಭಕ್ತಾಪರಾಧಸಹಿಷ್ಣು ಸಂಧಿ"

ಹರಿಃ ಓಂ.

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಶ್ರೀಲಕುಮಿ ವಲ್ಲಭಗೆ ನಮಿಪ ಕರು
ಣಾಳುಗಳ ನಾ ಕಾಣೆಸಲ್ಲಕ
ಚೇಲನವಲಿಗೆ ಮೆಚ್ಚಿಕೊಟ್ಟನು ಸಕಲಸಂಪದವ
ಕೇಳಿದಾಕ್ಷಣ ವಸ್ತ್ರಗಳ ಪಾಂ
ಚಾಲಿಗಿತ್ತನು ದೈತ್ಯ [illegible]
ಸೀಳಿ ನರ[illegible] ಕೃಪಾನಾಂಬು ೧

ದೇವಶರ್ಮಾಹ್ವಯ ಕುಟುಂಬಕ
ಜೀವನೋಪಾಯವನು ಕಾಣದೆ
ದೇವದೇವ ಶರಣ್ಯ ರಕ್ಷಿಸು ರಕ್ಷಿಸನೆ ಕೇಳಿ
ತಾವೊಲಿದು ಪಾಲಿಸಿದ ಸೌಖ್ಯ ಕೃ
ಪಾವಲೋಕನದಿಂದಲೀತನ
ಸೇವಿಸದೆ ಸೌಖ್ಯಗಳ ಬಯಸುವರಲ್ಪ ಮಾನವರು ೨

ಶ್ರೀನಿವಾಸನ ಪೋಲ್ವ ಕರುಣಿಗ
ಳೀನಳಿನಜಾಂಡದೊಳು ಕಾಣೆ ಪ್ರ
ವೀಣರಾದವರರಸಿನೋಳ್ಪುದು ಶ್ರುತಿಪುರಾಣದೊಳು
ದ್ರೋಣಭೀಷ್ಮ ಕೃಪಾದಿಗಳು ಕುರು
ಸೇನೆಯೊಳಗಿರಲವರವಗುಣಗ
ಳೇನು ನೋಡದೆ ಪಾಲಿಸಿದ ಪರಮಾತ್ಮ ಪರಗತಿಯ ೩

ಚಂಡವಿಕ್ರಮ ಚಕ್ರಶಂಖವ
ತೋಂಡಮಾನ ನೃಪಾಲಗಿತ್ತನು
ಭಾಂಡಕಾರಕ ಭೀಮನವ್ಯದಾಭರಣಗಳಿಗೊಲಿದ
ಮಂಡೆಯೊಡೆದಾಕಾಶರಾಜನ
ಹೆಂಡತಿಯನುಡಿಗೇಳಿ ಮಗಳಿಗೆ
ಗಂಡನೆನಿಸಿದ ಗಹನ ಮಹಿಮ ಗದಾಬ್ಜಧರಪಾಣಿ ೪

ಗೌತಮನ ನಿಜಪತ್ನಿಯನು ಪುರು
ಹೂತನೈದಿರ ಕಾಯ್ದು ವೃತ್ರನ
ಘಾತಿಸಿದ ಪಾಪವನು ನಾಲ್ಕುವಿಭಾಗ ಮಾಡಿದನು
ಶಾತಕುಂಭಾತ್ಮಕ ಕಿರೀಟವ
ಕೈತವದಿ ಕದ್ದೊಯ್ದಿದ ಇಂದ್ರಾ
ರಾತಿ ಬಾಗಿಲಕಾಯ್ದ ಭಕ್ತಾಧೀನ ಸ್ವೀಕರಿಸಿ ೫

ನಾರನಂದದವ್ರಜದ ಸ್ತ್ರೀಯರ
ಜಾರಕರ್ಮಕೆ ಒಲಿದ ಅಜಸುಕ
ಮಾರನೆನಿಸಿದ ನಂದಗೋಪಗೆ ನಂದನಭವ ಜನಕ
ವೈರವರ್ಜಿತ ದೈತ್ಯರನು ಸಂ
ಹಾರ ಮಾಡಿದ ವಿಪಗಮನ ಪೆಗ
ಲೇರಿದನು ಗೋಪಾಲಕರ ವೃಂದಾವನದೊಳಂದು ೬

ಶ್ರೀಕರಾರ್ಚಿತ ಪಾದಪಲ್ಲವ
ಗೋಕುಲದ ಗೊಲ್ಲತೆಯರೊಲಿಸಿದ
ಪಾಕಶಾಸನ ಪೂಜ್ಯಗೋಗೋವತ್ಸಗಳ ಕಾಯ್ದ
ಓಕರಿಸಿ ಕುರುಪತಿಯ ಭೋಜನ
ಸ್ವೀಕರಿಸಿದನು ವಿದುರನೌತನ
ಬಾಕುಲಿಕನಂದದಲಿ ತೋರಿದ ಭಕುತವತ್ಸಲನು ೭

ಪುತ್ರನೆನಿಸಿದ ಗೋಪಿದೇವಿಗೆ
ಭರ್ತೃವೆನಿಸಿದ ವ್ರಜದನಾರಿಯ
ರುತ್ರಲಾಲಿಸಿ ಪರ್ವತವನೆಗಹಿದ ಕೃಪಾಸಾಂದ್ರ
ಶತ್ರುತಾಪನ ಯಜ್ಞಪುರುಷನ
ಪುತ್ರಿಯರ ತಂದಾಳ್ದ ತ್ರಿಜಗ
ದ್ಧಾತ್ರ ಮಂಗಳಗಾತ್ರ ಪರಮಪವಿತ್ರ ಸುರಮಿತ್ರ ೮

ರೂಪನಾಮವಿಹೀನ ಗರ್ಗನಿ
ರೂಪಿತ ಸುನಾಮದಲಿ ಕರೆಸಿದ
ವ್ಯಾಪಕ ಸುಚಿಷ್ಣುರೆನಿಸಿ ತೋರ್ದ ಲೋಕರಿಗೆ
ದ್ವಾಪರಾಂತ್ಯದಿ ದೈತ್ಯರನು ಸಂ
ತಾಪಗೊಳಿಸುವೆನೆಂದು ಸ್ವಾಂತ
ದ್ವೀಪವುಂಬರ ಪನಪ ಪಡೆಹಿದನು ತನ್ನವರ ೯

ಶ್ರೀ ವಿರಿಂಚಾದ್ಯಮರಸುತ ನಾ
ನಾವತಾರವಮಾಡಿ ಸಲಹಿದ
ದೇವತೆಗಳನು ಋಷಿಗಳನು ಕ್ಷಿತಿಪರನು ಮಾನವರ
ಸೇವೆಗಳ ಕೈಕೊಂಡು ಫಲಗಳ
ನೀವ ನಿತ್ಯಾನಂದಮಯ ಸು
ಗ್ರೀವ ಧ್ರುವ ಮೊದಲಾದ ಭಕ್ತರಿಗಿತ್ತ ಪುರುಷಾರ್ಥ ೧೦

ದುಷ್ಟದಾನವಹರಣ ಸರ್ವೋ
ತ್ಕೃಷ್ಟ ಸದ್ಗುಣಭರಿತ ಭಕುತಾ
ಭೀಷ್ಟದಾಯಕ ಭಯವಿನಾಶಕ ವಿಗತಭಯಶೋಕ
ನಷ್ಟತುಷ್ಟಿಗಳಿಲ್ಲ ಸೃಷ್ಟ್ಯಾ
ದ್ಯಷ್ಟಕರ್ತನಿಗಾವ ಕಾಲದಿ
ಹೃಷ್ಟನಾಗುವ ಸ್ಮರಣೆಮಾತ್ರದಿ ಹೃದ್ಗುಹಾವಾಸಿ ೧೧

ಹಿಂದೆ ಪ್ರಳಯೋದಕದಿ ತಾವರ
ಗಂದನಂಜಿಸಿ ಕಾಯ್ದು ತಲೆಯಲಿ
ಬಾಂದೊರೆಯ ಪೊತ್ತಪಗೊಲಿದು ಪರಿಯಂಕ ಪದವಿತ್ತ
ವಂದಿಸಿದ ವೃಂದಾರಕರ ಸ
ದ್ವೃಂದ ಕುಣಿಸಿದಸುಧೆಯ ಕರುಣಾ
ಸಿಂಧು ಕಮಲಾಕಾಂತ ಬಹುನಿಶ್ಚಿಂತ ಜಯವಂತ ೧೨

ಸತ್ಯಸಂಕಲ್ಪಾನುಸಾರ ಪ್ರ
ವರ್ತಿಸುವ ಪ್ರಭು ತ್ರಿಜಗತಾನೇ
ಭೃತ್ಯರುಗಳನು ಭೋಕ್ತೃ ಭೋಗ್ಯ ಪದಾರ್ಥದೊಳಗಿದ್ದು
ತತ್ತದಾಹ್ವಯನಾಗಿ ತರ್ಪಕ
ತೃಪ್ತಿಬಡಿಸುವ ತತ್ತ್ವಪತಿಗಳ
ಸತ್ತ್ವದಸೆಗೆ [illegible] ನ ಫಲವೀವ ೧೩

ಬಿಟ್ಟಗಳನೆವದಿಂದವಾಗಲಿ
ಪೊಟ್ಟೆಗೋಸುಗವಾದಡಾಗಲಿ
ಕೆಟ್ಟರೋಗ ಪ್ರಯುಕ್ತವಾಗಲಿ ಅಣಕದಿಂದೊಮ್ಮೆ
ನಿಟ್ಟುಸಿರಿನಿಂ ಬಾಯ್ದೆರೆದು ಹರಿ
ವಿಠ್ಠಲಾ ಸಲಹೆಂದೆನಲು ಕೈ
ಗೊಟ್ಟು ಕಾವ ಕೃಪಾಳು ಸಂತತ ತನ್ನ ಭಕುತರನು ೧೪

ಈ ವಸುಂಧರೆಯೊಳಗೆ ಶ್ರೀ ಭೂ
ದೇವಿಯರರಸನ ಸುಗುಣಕರ್ಮಗ
ಳಾವ ಬಗೆಯಿಂದಾದೊಡಾಗಲಿ ಕೀರ್ತಿಸುವ ನರರ
ಕಾವ ಕಮಲದಳಾಯತಾಕ್ಷ ಕೃ
ಪಾವಲೋಕನದಿಂದ ಕಪಿ ಸು
ಗ್ರೀವ ಗೊಲಿದಂದದಲಿ ಒಲಿದಭಿಲಾಷೆ ಪೂರೈಪ ೧೫

ಚೇತನಂತರ್ಯಾಮಿ ಲಕುಮಿ
ನಾಥ ಕರ್ಮಗಳನುಸರಿಸಿ ಜನಿ
ತೋಧ ವಿಷ್ಣೋಯೆಂಬ ಶ್ರುತಿ ಪ್ರತಿಪಾದ್ಯನೆನ್ನೊಡನೆ
ಜಾತನಾಗುವ ಜನ್ಮರಹಿತಾ
ಕೂತಿನಂದನ ಭಕುತರಿಂದಾ
ಹೂತನಾಗಿ ಮನೋರಥವ ಬೇಡಿಸಿಕೊಳವಲೀವ ೧೬

ನೃಪತು ಎನಿಸುವ ಮನುಜರೊಳು ಸುರ
ವೃಷಭ ನಿಂದ್ರಿಯಗಳೊಳು ತತ್ತ್ವ
ದ್ವಿಷಯಗಳ ಭುಂಜಿಸುವ ಹೋತಾಹ್ವಯನು ತಾನಾಗಿ
ವೃಷರಹಿತ ವೇದದೊಳು ಋತು ಸತು
ಪೆಸರಿನಿಂದಲಿ ಕರೆಸುತ ಜಗ
ಪ್ರಸವಿತ ನಿರಂತರದಿ ಸಂತೈಸುವನು ಭಕುತರನು ೧೭

ಅಬ್ಜಭವ ಪಿತ ಜಲಧರಾದ್ರಿ ಯೊ
ಳಬ್ಜಗೋಜಾದ್ರಿಜನೆನಿಸಿ ಜಲ
ದುಬ್ಜಳಿಯು ಪೀಯೂಷದಾವರೆ ಶ್ರೀ ಶಶಾಂಕರೊಳು
ಕಬ್ಬು ಕದಳಿ ಲತಾತೃಣದ್ರುಮ
ದ್ದುಬ್ಬಗೆಯ ಮಾಡುತಿಹ ಗೋಜನು
ಇಬ್ಬಗೆ ಪ್ರತೀಕಮಣಿ ಮೃಗ ಸೃಜಿಪನದ್ರಿಜನು ೧೮

ಶ್ರುತಿವಿನುತ ಸರ್ವತ್ರದಲಿ ಭಾ
ರತಿ ರಮಣನೊಳಗಿದ್ದು ತಾ ಶುಚಿ
ಷತು ಎನಿಸಿ ಜಡ ಚೇತನರನು ಪವಿತ್ರಮಾಡುತಿಹ
ಅತುಳ ಮಹಿಮಾನಂತರೂಪಾ
ಚ್ಯುತನೆನಿಸಿ ಚಿದ್ದೇಹದೊಳು ಪ್ರಾ
ಕೃತ ಪುರುಷನಂದದಲಿ ನಾನಾಚೇಷ್ಟೆಗಳ ಮಾಳ್ಪ ೧೯

ಅತಿಥಿ ಎನಿಸುವನನ್ನಮಯ ಭಾ
ರತಿರಮಣನೊಳು ಪ್ರಾಣಮಯ ಪ್ರಾ
ಕೃತವಿಷಯ ಚಿಂತನೆಯ ಮಾಡಿಸುವನು ಮನೋಮಯನು
ಯತನ ವಿಜ್ಞಾನಮಯ ಬರಲದ
ಜತನಮಾಡಿಸಿ ಆತ್ಮ ಜಾಯಾ
ಸುತರ ಸಂಗದಿ ಸಖವನೀವಾನಂದಮಯನೆನಿಸಿ ೨೦

ಇನಿತು ರೂಪಾತ್ಮನಿಗೆ ದೋಷಗ
ಳೆನಿತು ಬಪ್ಪುವು ಪೇಳಿರೈ ಬ್ರಾ
ಹ್ಮಣ ಕುಲೋತ್ತಮರಾದವರು ನಿಷ್ಕಪಟ ಬುದ್ಧಿಯಲಿ
ಗುಣನಿಯಾಮಕ ತತ್ವದಾಹ್ವಯ
ನಸಿಲ ಕಾರ್ಯರ್ಗನ ಮಾಪ್ಪದೇವನ
ನನಗ ಪಾತಕವಿ ಮೋಷರಾಗಗಳಿಲ್ಲ ಕೆಡುತಿಹುವು ೨೧

ಕುಸ್ಥನೆನಿಸುವ ಭೂಮಿಯೊಳಗಾ
ಶಸ್ಥನೆನಿಸುವ ದಿಗ್ವಲಯದೊಳು
ಖಸ್ಥನೆನಿಪಾಕಾಶದೋಳೊಬ್ಬೊಬ್ಬರೊಳಗಿದ್ದು
ವ್ಯಸ್ತನೆನಿಸುವ ಸರ್ವರೊಳಗೆ ಸ
ಮಸ್ತನೆನಿಸುವ ಬಳಿಯಲಿದ್ದು ಉ
ಪಸ್ತನೆನಿಪ ವಿಶೋಧನ ವಿಶುದ್ಧಾತ್ಮ ಲೋಕದೊಳು ೨೨

ಜ್ಞಾನದನು ಎಂದೆನಿಪ ಶಾಸ್ತ್ರದಿ
ಮಾನದನು ಎಂದೆನಿಪ ವಸ್ತ್ರದಿ
ದಾನಶೀಲ ಸುಬುದ್ಧಿಯೊಳಗೆ ವದಾನ್ಯನೆನಿಸುವನು
ವೈನತೇಯವರೂಥ ತತ್ತತ್
ಸ್ಥಾನದಲಿ ತತ್ತತ್ಸ್ವಭಾವಗ
ಳಾನುಸಾರ ಚರಿತ್ರೆಮಾಡುತ ನಿತ್ಯ ನೆಲೆಸಿಪ್ಪ ೨೩

ಗ್ರಾಮಪನೊಳಗ್ರಣಿಯ ಎನಿಸುವ
ಗ್ರಾಮಣಿಯು ಎನಿಸುವನು ಜನರೊಳು
ಗ್ರಾಮಪ ಗ್ರಾಮಗಳೊಳಗೆ ಶ್ರೀಮಾನೆನಿಸುತಿಪ್ಪ
ಶ್ರೀಮನೋರಮ ತಾನೆ ಯೋಗ
ಕ್ಷೇಮನಾಮಕನಾಗಿ ಸಲಹುವ
ಈ ಮಹಿಮೆ ನಿಕ್ಕಾದ ದೇವರಿಗುಂಟೆ ಲೋಕದೊಳು ೨೪

ವಿಜಯಸಾರಥಿಯೆಂದು ಗರುಡ
ಧ್ವಜನ ಮೂರ್ತಿಯ ಭಕ್ತಿಪೂರ್ವಕ
ಭಜಿಸುತಿಪ್ಪ ಮಹಾತ್ಮರಿಗೆ ಸರ್ವತ್ರದಲಿ ಒಲಿದು
ವಿಜಯದನು ತಾನಾಗಿ ಸಲಹುವ
ಭುಜಗಭೂಷಣ ಪೂಜ್ಯಚರಣಾಂ
ಬುಜ ವಿಭೂತಿಯ ಭುವನ ಮೋಹನರೂಪ ಸಿರಿಲೋಲ ೨೫

ಅನಭಿಮತ ಕರ್ಮಪ್ರವಹದೊಳ
ಗನಿಮಿಷಾದಿ ಸಮಸ್ತ ಚೇತನ
ಗಣವಿಹುದು ತತ್ಫಲಗಳುಣ್ಣದೆ ಸೃಷ್ಟಿಸುವ ಮುನ್ನ
ವನಿತೆಯಿಂದೊಡಗೂಡಿ ಕರುಣಾ
ವನಧಿ ವಿಸರ್ಜಿಸೆ ತಮ್ಮ ತಮ್ಮಯ
ಅನುಚಿತೋಚಿತ ಕರ್ಮಫಲಗಳನುಣುತ ಚರಿಸುವರು ೨೬

ಝಲ್ಲಡಿಯ ನೆಳಲಂತೆ ತೋರ್ಪುದು
ಎಲ್ಲಕಾಲದಿ ಭವದಸೌಖ್ಯವು
ಎಲ್ಲ ಪೊಕ್ಕರು ಬಿಡದೆ ಬೆಂಬತ್ತಿಹುದು ಜೀವರಿಗೆ
ಒಲ್ಲೆನೆಂದರೆ ಬಿಡದು ಹರಿ ನಿ
ರ್ಮಾಲ್ಯ ನೈವೇದ್ಯವನು ಭುಂಜಿಸಿ
ಬಲ್ಲವರ ಕೂಡಾಡು ಭವದುಃಖಗಳ ನೀಡಾಡು ೨೭

ಕುಟ್ಟಿ ಕೊಯಿದುದ ನಟ್ಟು ಇಟ್ಟುದ
ಸುಟ್ಟು ಕೊಟ್ಟುದ ಮುಟ್ಟಲಘಹಿ
ಟ್ಟುಟ್ಟು ಮಾಳ್ಪುದು ಐತ್ತಲುಂಡುಚ್ಛಿಷ್ಟ ಸಜ್ಜನರ
ಬಿಟ್ಟು ತನ್ನಯ ಹೊಟ್ಟೆಗೋಸುಗ
ಘಟ್ಟಸುಣುತಿಹ ಕೆಟ್ಟಮನುಜರ
ಕಟ್ಟಿವೈದೆಮಪಟ್ಟಣದೊಳೊತ್ತೊಟ್ಟಲಿಟ್ಟಹರು ೨೮

ಜಾಗುಮಾಡದೆ ಭೋಗದಾಸೆಯ
ನೀಗಿ ಪರಮಾನುರಾಗದಿಂದಲಿ
ಭೋಗಿ ಶಯನಾಗಾರದಾ ಹೆಬ್ಬಾಗಿಲಲಿನಿಂದು
ಕೂಗುತಲಿ ತಿರಬಾಗಿ ಕರುಣಾ
ಸಾಗರನೆ ಭವರೋಗ ಭೇಷಜ
ಕೈಗೊಡೆಂದೆನೆ ಬೇಗಲೊದಗುವ ಭಾಗವತರರಸು ೨೯

ಏನು ಕರುಣವೊ ತನ್ನವರಲಿ ದ
ಯಾನಿಧಿಗೆ ಸದ್ಭಕ್ತ ಜನರತಿ
ಹೀನಕರ್ಮವ ಮಾಡಿದರು ಸರಿ ಸ್ವೀಕರಿಸಿ ಪೊರೆವ
ಪ್ರಾಣಹಿಂಸಕ ಲುಬ್ಧಕಗೆ ಸು
ಜ್ಞಾನ ಭಕ್ತಿಗಳಿತ್ತು ದಶರಥ
ಸೂನು ವಾಲ್ಮೀಕಿಋಷಿಯ ಮಾಡಿದ ಪರಮ ಕರುಣಾಳು ೩೦

ಮೂಢ ಮಾನವನೆಲ್ಲ ಕಾಲದಿ
ಬೇಡಿಕೊಂಬಿನಿತೆಂದು ದೈನ್ಯದಿ
ಬೇಡದಂದದಿ ಮಾಡು ಪುರುಷಾರ್ಥಗಳ ಸ್ವಪ್ನದಲಿ
ನೀಡುವೊಡೆ ನಿನ್ನಮಲಗುಣ ಕೊಂ
ಡಾಡಿ ಹಿಗ್ಗುವ ಭಾಗವತರೊಡ
ನಾಡಿಸೆನ್ನನು ಜನುಮ ಜನುಮಗಳಲ್ಲಿ ಮರೆಯದಲೆ ೩೧

ಚತುರವಿಧ ಪುರುಷಾರ್ಥರೂಪನು
ಚತುರ ಮೂರ್ತ್ಯಾತ್ಮಕನಿರಲು ಮ
ತ್ತಿತರ ಪುರುಷಾರ್ಥಗಳ ಬಯಸುವರೇನೊ ಬಲ್ಲವರು
ಮತಿವಿಹೀನರು ಐಹಿಕ ಸುಖ ಶಾ
ಶ್ವತವಿದೆಂದರಿದನುದಿನ ಜಗ
ತ್ಪತಿಯ ಪಾದಾಬ್ಜಗಳ ಭಜಿಸದೆ ಭವದಿ ಬಳಲುವರು ೩೨

ಒಮ್ಮೆಗಾದರು ಜೀವರೊಳು ವೈ
ಷಮ್ಯ ದ್ವೇಷಾಸೂಯವಿಲ್ಲ ಸು
ಧರ್ಮ ನಾಮಕ ಸಂತಯಿಸುವನು ಸರ್ವರನು ನಿತ್ಯ
ಬ್ರಹ್ಮಕಲ್ಪಾಂತದಲಿ ವೇದಾ
ಗಮ್ಯ ಶ್ರೀಜಗನ್ನಾಥವಿಠ್ಠಲ
ಸುಮ್ಮನೀವನು ತ್ರಿವಿಧರಿಗೆ ಅವರವರ ನಿಜಗತಿಯ ೩೩

ಅಂತು ಸಂಧಿ ೨೨ಕ್ಕೆ ಪದ್ಯಗಳು ೭೦೯ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು



## ಸಂಧಿ ೨೩ "ಕಲ್ಪಸಾಧನ ಸಂಧಿ"

ಹರಿಃ ಓಂ

**ಹರಿಕಥಾಮೃತಸಾರ ಗುರುಗಳ**
**ಕರುಣದಿಂದಾಪನಿತು ಪೇಳುವೆ**
**ಪರಮಭಗವದ್ಭಕ್ತರಿದ ನಾದರದಿ ಕೇಳುವುದು** ಪ

ಏಕವಿಂಶತಿ ಸುತ ಪ್ರವರ್ತಕ
ರಾಕು ಮಾಯ್ಗಳ ಕುಹಕಯುಕ್ತಿ ನಿ
ರಾಕರಿಸಿ ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದ
ಶ್ರೀಕಳತ್ರನ ಸದನ ದ್ವಿಜಪ ಪಿ
ನಾಕಿಸನ್ನುತ ಮಹಿಮ ಪರಮ ಕೃ
ಪಾಕಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ ೧

ನೀ ಮೊದಲಾಗಿಪ್ಪಮಲ ಮೋ
ಕ್ಷಾಧಿಕಾರಿಗಳೆಂಬ ಜೀವರ
ಸಾಧನಗಳಪರೋಕ್ಷನಂತರ ಲಿಂಗಭಂಗವನು
ಸಾಧುಗಳು ಚಿತ್ತೈಸುವುದೆನ್ನಪ
ರಾಧಗಳ ನೋಡದಲೆ ಚಕ್ರಗ
ದಾಧರನು ಪೇಳಿಸಿದ ತೆರದಂದದಲಿ ಪೇಳುವೆನು ೨

ತೃಣ ಕ್ರಿಮಿ ದ್ವಿಜ ಪಶುನರೋತ್ತಮ
ಜನಪ ನರ ಗಂಧರ್ವಗಣರಿವ
ರೆನಿಪರಂಶವಿಹೀನ ಕರ್ಮಜಯೋಗಿಗಳು ಎಂದು
ತನು ಪ್ರತೀಕದಿ ಬಿಂಬನನುಪಾ
ಸನವ ಗೈಯುತಲಿಂದ್ರಿಯಜಕ
ರ್ಮಾನವರತ ಹರಿಗರ್ಪಿಸುತ ನಿರ್ಮಮರು ಎನಿಸುವರು ೩

ಏಳುವಿಧ ಜೀವಗಣ ಬಹಳ ಸು
ರಾಳಿ ಸಂಖ್ಯಾನೇಮವುಳ್ಳದು
ತಾಳಿ ನರದೇಹವನು ಬ್ರಾಹ್ಮಣ ಕುಲದಲವತರಿಸಿ
ಸ್ಥೂಲ ಕರ್ಮವ ತೊರೆದು ಗುರುಗಳು
ಪೇಳಿದರ್ಥವ ತಿಳಿದು ತತ್ತ
ತ್ಕಾಲಧರ್ಮ ಸಮರ್ಪಿಸುವರು ಸುಕರ್ಮಯೋಗಿಗಳು ೪

ಹೀನಕರ್ಮಗಳಿಂದ ಬಹುವಿಧ
ಯೋನಿಯಲಿ ಸಂಚರಿಸಿ ಪ್ರಾಂತಕೆ
ಮಾನುಷತ್ವವನೈದಿ ಸರ್ವೋತ್ತಮನು ಹರಿಯೆಂಬ
ಜ್ಞಾನ ಭಕ್ತಿಗಳಿಂದ ವೇದೋ
ಕ್ತಾನುಸಾರ ಸಹಸ್ರ ಜನುಮಾ
ಸ್ಯಾನಕರ್ಮವಮಾಡಿ ಹರಿಗರ್ಪಿಸಿದ ನಂತರದಿ ೫

ಹತ್ತು ಜನುಮಗಳಲ್ಲಿ ಹರಿ ಸ
ರ್ವೋತ್ತಮನು ಸುರಾಸುರಗಣಾರ್ಚಿತ
ಚಿತ್ರಕರ್ಮ ವಿಶೋಕನಂತಾನಂತ ರೂಪಾತ್ಮ
ಸತ್ಯಸಂಕಲ್ಪಕನು ಜಗದು
ತ್ಪತ್ತಿ ಸ್ಥಿತಿಲಯ ಕಾರಣ ಜರಾ
ಮೃತ್ಯು ವರ್ಜಿತನೆಂದುಪಾಸನೆಗೈದ ತರುವಾಯ ೬

ಮೂರು ಜನುಮಗಳಲ್ಲಿ ದೇಹಾ
ಗಾರ ಪಶುಧನ ಪತ್ನಿಮಿತ್ರ ಕು
ಮಾರ ಮಾತಾಪಿತೃಗಳಲ್ಲಿಹ ಸ್ನೇಹಕಿಂತಧಿಕ
ಮಾರರಮಣನಲಿ ಬಿಡದೆ ಮಾಡುವ
ಸೂರಿಗಳು ಈವುಕ್ತ ಜನುಮವ
ಮೀರಿ ಪರಮಾತ್ಮನ ಸ್ವದೇಹದಿ ನೋಡಿ ಸುಖಿಸುವರು ೭

ದೇವಗಾಯಕಚಾರಣರ ಪಿತೃ
ದೇವರಲ್ಲರು ಜ್ಞಾನಯೋಗಿ ಗ
ಳಾವ ಕಾಲಕು ಪುಷ್ಕರ ಶನೈಶ್ಚರ ಉಷಾಸ್ವಾಹಾ
ದೇವ ಬುಧ ಸನಕಾದಿಗಳು ಮೋ
ಘಾವಶಿಪ ಪರ್ಜನ್ಯ ಸಾಂಶರು
ಈ ಉಭಯಗಣದೊಳಗಿವರು ವಿಜ್ಞಾನಯೋಗಿಗಳು ೮

ಭರತಖಂಡದಿ ಮೂರು ಜನುಮವ
ಧರಿಸಿ ನಿಷ್ಕಾಮಕ ಸುಕರ್ಮ
ಚರಿಸಿದಾನಂತರದಿ ದಶಸಾಹಸ್ರ ಜನ್ಮದಲಿ
ಉರುತರ ಜ್ಞಾನವನು ಪಡದೈ
ದೆರಡು ದಶದೇಹದಲಿ ಭಕುತಿಯು
ನಿರವಧಿಕನಲಿ ಮಾಡಿ ಕಾಂಬರು ಬಿಂಬರೂಪವನು ೯

ಸಾಧನಾತ್ಪೂರ್ವದಲಿ ಇವರಿಗ
ನಾದಿಕಾಲ ಪರೋಕ್ಷವಿಲ್ಲ ನಿ
ಷೇಧ ಕರ್ಮಗಳಿಲ್ಲ ನರಕಪ್ರಾಪ್ತಿ ಮೊದಲಿಲ್ಲ
ವೇದಶಾಸ್ತ್ರಗಳಲ್ಲಿ ಇಪ್ಪ ವಿ
ರೋಧವಾಕ್ಯವ ಪರಿಹರಿಸಿ ಮಧು
ಸೂದನನೆ ಸರ್ವೋತ್ತಮೋತ್ತಮನೆಂದು ಸ್ಥಾಪಿಸುವರು ೧೦

ಸತ್ಯಲೋಕಾಧಿಪನ ಹಿಡಿದು ಶ
ತಸ್ಥ ದೇವಗಣಾಂತ ಎಲ್ಲರು
ಭಕ್ತಿಯೋಗಿಗಳೆಂದು ಕರೆಸುವರಾವಕಾಲದಲಿ
ಭಕ್ತಿಯೋಗ್ಯರಮಧ್ಯದಲಿ ಸ
ದ್ವ್ಯಕ್ತಿ ವಿಜ್ಞಾನಾದಿ ಗುಣದಿಂ
ದುತ್ತಮೋತ್ತಮ ಬ್ರಹ್ಮವಾಯುರುವಾಣಿ ವಾಗ್ದೇಶಿ ೧೧

ಸುರಗಣಕೆ ಭಕ್ತ್ಯಾದಿ ಗುಣವು ಸ
ಹಜವೆನಿಸುವುವು ಕ್ರಮದಿ ವೃದ್ಧ್ಯ
ಬ್ಜಜ ಪವನ ಪರಿಯಂತ ಬಿಂಬೋಪಾಸನವು ಅಧಿಕ
ವೃಜಿನವರ್ಜಿತರಿವರೊಳಗೆ ತ್ರಿಗು
ಣಜ ವಿಕಾರಗಳಿಲ್ಲವೆಂದಿಗು
ದ್ವಿಜಫಣಿಪ ಮೃಡ ಶಕ್ರ ಮೊದಲಾದವರೊಳಿರುತಿಹವು ೧೨

ಸಾಧನಾತ್ಪೂರ್ವದಲಿ ಈ ಋ
ಜ್ವಾದಿ ತಾತ್ವಿಕರೆನಿಪ ಸುರಗಣ
ಸಾದಿ ಸಾಮಾನ್ಯಾಪರೋಕ್ಷಿಗಳೆಂದು ಕರೆಸುವುದು
ಸಾಧನೋತ್ತರ ಸ್ವಸ್ವ ಬಿಂಬವು
ಪಾಟರಹಿತಾದಿತ್ಯನಂದದಿ
ಸಾದರದಿ ನೋಡುವರು ಅಧಿಕಾರಾನುಸಾರದಲಿ ೧೩

ಭಿನ್ನ ಭಕ್ತರು ಎನಿಸುತಿಹರು ಸು
ಪರ್ಣ ಶೇಷಾದ್ಯಮರರಲ್ಲ
ಚ್ಛಿನ್ನಭಕ್ತರು ನಾಲ್ವರೆನಿಪರು ಭಾರತೀಪ್ರಾಣ
ಸೂನ್ಮೃಡಲ ವಾಗೀಶಪ್ರಿಯರು ಪಣೆ
ಗಣ್ಣ ಮೊದಲಾದವರೊಳಗ ತ
ತ್ತನ್ನಿಯಾಮಕರಾಗಿ ವ್ಯಾಪಾರವನೆ ಮಾಡುವರು ೧೪

ಹೀನ ಸತ್ವವರ್ಗಗಳರಡು ಸಮ
ಮಾನ ದೇವನು ಮಾಳ್ಪನಿದಕನು
ಮಾನವಿಲ್ಲೆಂದೆನುತ ದೃಢಭಕ್ತಿಯಲಿ ಭಜಿಪಗೆ
ಪ್ರಾಣಪತಿ ಸಂಪ್ರೀತನಾಗಿ ಕು
ಯೋನಿಗಳ ಕೊಡನೆಲ್ಲ ಕರ್ಮಗ
ಳಾನೆ ಮಾಡುವೆನೆಂಬ ಮನುಜನ ನರಕಕೈದಿಸುವ ೧೫

ದೇವಋಷಿ ಪಿತೃ ನೃಪನರೆನಿಸುವ
ಐವರೊಳು ನೆಲೆಸಿದ್ದು ಅವರ ಸ್ವ
ಭಾವಕರ್ಮವಮಾಡಿ ಮಾಡಿಪನೊಂದು ರೂಪದಲಿ
ಭಾವಿಬ್ರಹ್ಮನು ಕೂರ್ಮರೂಪದ
ಲೀ ವಿರಿಂಚಾಂಡವನು ಬೆನ್ನೊಳು
ತಾವಹಿಸಿ ಲೋಕಗಳ ಪೊರೆವನು ದ್ವಿತಿಯರೂಪದಲಿ ೬

ಗುಪ್ತನಾಗಿದ್ದನಿಳದೇವ ದ್ವಿ
ಸಪ್ತಲೋಕದ ಜೀವರೊಳಗೆ ತ್ರಿ
ಸಪ್ತಸಾವಿರದಾರುನೂರು ಶ್ವಾಸ ಜಪಗಳನು
ಸುಪ್ತಿ ಸ್ವಪ್ನದಿ ಜಾಗ್ರತೆಗಳಲಿ
ಆಪ್ತನಂದದಿ ಮಾಡಿ ಮಾಡಿಸಿ
ಕ್ಲುಪ್ತ ಭೋಗಗಳೀವ ಪ್ರಾಂತಕೆ ತೃತಿಯರೂಪದಲಿ ೧೭

ಶುದ್ಧ ಸತ್ವಾತ್ಮಕ ಶರೀರದೊ
ಳಿದ್ದು ಕಾಲಕು ಲಿಂಗ ದೇಹವು
ಬದ್ಧವಾಗದು ದಗ್ಧಪಟದೋಪಾದಿ ಇರುತಿಹುದು
ಸಿದ್ಧಸಾಧನ ಸರ್ವರೊಳಗನ
ವದ್ಯನೆನಿಸುವ ಗರುಡ ಶೇಷ ಕ
ಪರ್ದಿ ಮೊದಲಾದಮರರೆಲ್ಲರು ದಾಸರೆನಿಸುವರು ೧೮

ಗಣಮೊಳಗೆ ತಾನಿದ್ದು ಋಜುಯೆಂ
ದೆನಿಸಿಕೊಂಬನು ಕಲ್ಪಶತ ಸಾ
ಧನವಗೈದಾನಂತರದಿ ತಾ ಕಲ್ಕಿಯೆನಿಸುವನು
ದ್ವಿನವಶೀತಿ ಪ್ರಾಂತಭಾಗದ
ಲನಿಳ ಹನುಮದ್ಭೀಮ ರೂಪದಿ
ದನುಜರೆಲ್ಲರ ಸದೆದು ಮಧ್ವಾಚಾರ್ಯರೆನಿಸಿದನು ೧೯

ವಿಶ್ವವ್ಯಾಪಕ ಹರಿಗೆ ತಾ ಸಾ
ದೃಶ್ಯರೂಪವ ಧರಿಸಿ ಬ್ರಹ್ಮ ಸ
ರಸ್ವತೀ ಭಾರತಿಗಳಿಂದೊಡಗೂಡಿ ಪವಮಾನ
ಶಾಶ್ವತ ಸುಭಕ್ತಿಯಲಿ ಸುಜ್ಞಾ
ನ ಸ್ವರೂಪನ ರೂಪ ಗುಣಗಳ
ನಶ್ವರವು ಎಂದೆನುತ ಪೇಳುವ ಶ್ರುತಿಗಳೊಳಗಿದ್ದು ೨೦

ಖೇಟ ಕುಕ್ಕುಟ ಒಲಟವೆಂಬ ತ್ರಿ
ಕೋಟರೂಪವಧರಿಸಿ ಸತತ ನಿ
ಶಾಟರನು ಸಂಹರಿಸಿ ಸಲಹುವ ಸರ್ವ ಸಜ್ಜನರ
ಕೈಟಭಾರಿಯ ಪುರದ ಪ್ರಥಮ ಕ
ವಾಟನೆನಿಸುವ ಗರುಡ ಶೇಷ ಲ
ಲಾಟಲೋಚನ ಮುಖ್ಯ ಸುರರಿಗೆ ಆವಕಾಲದಲಿ ೨೧

ಈ ಋಜುಗಳೊಳಗೊಬ್ಬ ಸಾಧನ
ನೂರುಕಲ್ಪದಿ ಮಾಡಿ ಕರೆಸುವ
ಚಾರುತರ ಮಂಗಳ ಸುನಾಮದಿ ಕಲ್ಪಕಲ್ಪದಲಿ
ಸೂರಿಗಳು ಸಂತುತಿಸಿ ವಂದಿಸೆ
ಘೋರ ದುರಿತಗಳಳಿದು ಪೋಪುವು
ಮಾರರಮಣ ಸಂಪ್ರೀತನಾಗುವ ಸರ್ವಕಾಲದಲಿ ೨೨

ಪಾಹಿ ಕಲ್ಕಿ ಸುತೇಜ ದಾಸನೆ
ಪಾಹಿ ಧರ್ಮಾಧರ್ಮ ಖಂಡನೆ ಯ ಋಷಿಗ ನಮೊ
ಪಾಹಿ ವರ್ಚಸ್ವಿ ವಿಭೀಷಣ ಸಾಧು ಮಹಿಪತಿಯ
ಪಾಹಿ ಸದ್ಧರ್ಮಜ್ಞ ಧರ್ಮಜ
ಪಾಹಿ ಸಂಪೂರ್ಣಶುಚಿ ವೈಕೃತ
ಪಾಹಿ ಅಂಜನ ಸರ್ಪಪನೆ ಖರ್ಪಟ ಶ್ರದ್ಧಾಹ್ವ ೨೩

ಪಾಹಿ ಸಂಧ್ಯಾನ ವಿಜ್ಞಾನನೆ
ಪಾಹಿ ಮಹಾವಿಜ್ಞಾನಕೀರ್ತನೆ ಪಾಹಿ
ಪಾಹಿ ಸಂಕೀರ್ಣಾಯ್ಯ ಕತ್ವನ ಪ್ರತಿಬುದ್ಧ ಜಯ
ಪಾಹಿ ಮಾಹತ್ಮರ ಸುಪ್ರಿಯರನೆ
ಪಾಹಿಮಾಂ ವೇಧಾವಿ ಜಯ ಜಯ
ಪಾಹಿಮಾಂ ಶಾಂತಿವನ್ನ ಮನು ಮಾಂಪಾಹಿ ಮಾಂಪಾಯ ೨೪

ಪಾಹಿ ಮೋದ ಪ್ರಮೋದ ಸಂತಸ
ಪಾಹಿ ಆನಂದ,-ಸಂತುಷ್ಟನೆ
ಪಾಹಿಮಾಂ ಚಾರ್ವಾಂಗ ಚಾರು ಸುಬಾಹು ಚಾರುಪವ
ಪಾಹಿ ಪಾಹಿ ಸುಲೋಚನನೆ ಮಾಂ
ಪಾಹಿ ಸಾರಸ್ವತ ಸುನೀರನೆ
ಪಾಹಿ ಪ್ರಾಜ್ಞನೈಕಪಿಯಲಂಪಟ ಪಾಹಿ ಸರ್ವಜ್ಞ ೨೫

ಪಾಹಿಮಾಂ ಸರ್ವಜಿತ್ತು ಮಿತ್ರನೆ
ಪಾಹಿ ಪಾಪವಿನಾಶಕನೆ ಮಾಂ
ಪಾಹಿ ಧರ್ಮವಿನೀತಶಾರದ ಒಜ ಸ ತಪಸ್ವಿ
ಪಾಹಿಮಾಂ ತೇಜಸ್ವಿ ನಮೊಮಾಂ
ಪಾಹಿ ದಾನ ಸುಶೀಲ ನಮೊಮಾಂ
ಪಾಹಿ ಯಜ್ಞಸುಕರ್ತ ಯಜ್ವೀ ಯಾಗಪ್ರವರ್ತಕನ ೨೬

ಪಾಹಿಪಾಹಿತ್ರಾಣ ಅಮರ್ರುಷಿ
ಪಾಹಿಮಾಂ ಉಪದೇಷ್ಟ ತಾರಕ
ಪಾಹಿಕಾಲಕ್ರೀಡನ ಸುಕರ್ತಾ ಸುಕಾಲಜ್ಞ
ಪಾಹಿಕಾಲಸುಸೂಚಕನೆಮಾಂ
ಪಾಹಿ ಕಲಿಸಂಹರ್ತ ಕಲಿಮಾಂ
ಪಾಹಿ ಕಾಲಶ್ಯಾಮವೇತ ಸದಾರತಸುಬಲನೆ ೨೭

ಪಾಹಿಪಾಹಿಸಹೋಸದೌಕಪಿ
ಪಾಹಿಗಮ್ಯಜ್ಞಾನದಶಕುಲ
ಪಾಹಿಮಾಂ ಶ್ರೋತವ್ಯನಮೊಸಂಕೀರ್ತವ್ಯನಮೊ
ಪಾಹಿಮಾಂ ಮಂತವ್ಯಕ್ರವ್ಯನೆ
ಪಾಹಿಮಾಂ ದೃಷ್ಟವ್ಯ ಸಖ್ಯನೆ
ಪಾಹಿಮಾಂ ಗಂತವ್ಯಕ್ರವ್ಯನೆ ಪಾಹಿಸ್ಮರ್ತವ್ಯ ೩೮

ಪಾಹಿಸೇವ್ಯ ಸುಭವ್ಯನಮೊಮಾಂ
ಪಾಹಿಸ್ವರ್ಗವ್ಯ ನಮೊಭಾವ್ಯನೆ
ಪಾಹಿಮಾಂಜ್ಞಾತವ್ಯ ನಮೊವಕ್ತವ್ಯಗವ್ಯನಮೊ
ಪಾಹಿಮಾಂ ಆತವ್ಯವಾಯುವೆ
ಪಾಹಿಬ್ರಹ್ಮ ಬ್ರಾಹ್ಮಣಪ್ರಿಯ
ಪಾಹಿಪಾಹಿ ಸರಸ್ವತೀಪತೆ ಜಗದ್ಗುರುವರ್ಯ ೩೯

ವಾಮನ ಪುರಾಣದಲಿ ಹೇಳಿದ
ಈಮಹಾತ್ಮರ ಪರಮಮಂಗಳ
ನಾಮಗಳ ಸಂಪ್ರೀತಿ ಪೂರ್ವಕ ನಿತ್ಯಸ್ಮರಿಸುವರ
ಶ್ರೀಮನೋಹರನವರು ಬೇಡಿದ
ಕಾಮಿತಾರ್ಥಗಳಿತ್ತು ತನ್ನತ್ರಿ
ಧಾಮದೊಳಗನುದಿನದಲಿಟ್ಟಾನಂದ ಪಡಿಸುವನು ೪೦

ಈಸಮೀರಗೆ ನೂರುಜನ್ಮವು
ಹಾಸುಖ ಪ್ರಾರಬ್ಧ ಭೋಗಪ್ರ
ಯಾಸವಿಲ್ಲದ ಲೈದಿದನು ಲೋಕಾಧಿಪತ್ಯವನು
ಭೂಸುರನ ಒಪ್ಪಿಡಿಯವಲಿಗೆ ವಿ
ಶೇಷಸೌಖ್ಯವನಿತ್ತದಾತನ
ದಾಸವರ್ಯನು ಲೋಕಪತಿಯೆ ನಿಸುವುದು ಆಚ್ಚರಿಯ ೪೧

ದ್ವಿಶತಕಲ್ಪಗಳಲ್ಲಿ ಬಿಡದೀ
ಪೆಸರಿನಿಂದಲಿ ಕರಸಿದನು ತ
ನ್ನೊಶಗರವುರರೊಳಿಟ್ಟು ಮಾಡುವನವರ ಸಾಧನವ
ಅಸದುಪಾಸನೆಗೈವ ಕಲ್ಮಾ
ದ್ಯಸುರವರ ಸಂಹರಿಸುತಲಿವೊಂ
ದ್ಯಸುರಪದವೈದಿದನು ಗುರುಪವಮಾನ ಸತಿಯೊಡನೆ ೩೦

ಅನಿಮಿಷರ ನಾಮದಲಿ ಕರಸುವ
ನನಿಲದೇವನು ಒಂದು ಕಲ್ಪದಿ
ವನಜಸಂಭವನೆನಿಸಿ ಎಂಭತ್ತೇಳುವರವರುಷ
ಗುಣತ್ರಯವರ್ಜಿತನ ಮಂಗಳ
ಗುಣಕ್ರಿಯ ಸುರೂಪಗಳುಪಾ
ಸನೆಯನವ್ಯಕ್ತಾದಿ ಪೃಥ್ವ್ಯಂತರದಲಿರುತಿಹುದು ೩೨

ಮಹಿತ ಋಜುಗಣ ಕೊಂಡೆಪರವೋ
ತ್ಸಹ ನಿವರ್ಜಿತವೆಂಬ ದೋಷವು
ವಿಹಿತವೇಸರಿ ಇದನು ಪೇಳದೆ ಮುಕ್ತಬ್ರಹ್ಮರಿಗೆ
ಬಹುದು ಸಾಮ್ಯಜ್ಞಾನ ಭಕುತಿಯು
ದ್ರುಹಿಣಪದ ಪರ್ಯಂತ ವೃದ್ಧಿಯು
ಬಹಿರುಪಾಸನೆ ಯುಂಟನಂತರ ಬಿಂಬದರ್ಶನವು ೩೪

ಜ್ಞಾನರಹಿತ ಭಯತ್ವಪೇಳ್ವೆವು
ದಾಣದೈತ್ಯರ ಮೋಹಕವು ಚತು
ರಾನನಗೆ ಕೂಡುವುದೆ ಮೋಹಜ್ಞಾನ ಭಯಶೋಕ
ಭಾನುಮಂಡಲ ಚಲಿಸಿದಂದದಿ
ಕಾಣುವುದು ದೃಗ್ದೋಷದಿಂದಲಿ
ಶ್ರೀನಿವಾಸನ ಪ್ರೀತಿಗೋಸುಗ ತೋರ್ದನಲ್ಲದಲೆ ೩೫

ಕಮಲಸಂಭವ ಸರ್ವರೊಳಗು
ತ್ತಮನೆನಿಸುವನು ಎಲ್ಲಕಾಲದಿ
ವಿಮಲಭಕುತಿಜ್ಞಾನ ವೈರಾಗ್ಯಾದಿಗುಣದಿಂದ
ಸಮಭ್ಯಧಿಕವರ್ಜಿತನ ಗುಣಗಳ
ರಮೆಯುಮುಖದಿಂದರಿತು ನಿತ್ಯದಿ
ದ್ಯುಮಣಿಕೋಟಿಗಳಂತೆ ಕಾಂಬನು ಬಿಂಬರೂಪವನು ೨೬

ಜ್ಞಾನಭಕ್ತ್ಯಾದ್ಯಖಿಳಗುಣಚತು
ರಾನನನೊಳಿಪ್ಪಂತ ಮುಖ್ಯ
ಪ್ರಾಣನಲಿ ಚಿಂತಿಪುದು ಯುಕ್ತ್ಯಂಚಿತು ಕೊರತಯಾಗಿ
ನ್ಯೂನ ಋಜುಗಣ ಜೀವರಲ್ಲಿಕ್ರ
ಮೇಣವೃದ್ಧಿ ಜ್ಞಾನ ಭಕುತಿಸ
ಮಾನಭಾರತಿ ವಾಣಿಗಳಲಿ ಪವಸ್ರುಯುಕ್ತ್ಯಧಿಕ ೨೭

ಸೌರಿಸಾರ್ಯ್ಯನ ತೆರದಿ ಬ್ರಹ್ಮಸ
ಮೀರಗಾಯಿತ್ರೀ ಗಿರಿಗಳೊಳು
ತೋರುವುದು ಅಸ್ಪಷ್ಟರೂಪದಿ ಮುಕ್ತಿ ಪರಿಯಂತ
ವಾರಿಜಾಸನ ವಾಯುವಾಣೀ
ಭಾರತಿಗಳಿಗೆ ಮಹಾ ಪ್ರಳಯದಿ
ಬಾರದಜ್ಞಾನಾದಿ ದೋಷವು ಹರಿಕೃಪಾಬಲದಿ ೨೮

ನೂರುವರುಷಾನಂತರದಲಿ ಸ
ರೋರುಹಾಸನು ತನ್ನ ಕಲ್ಪದ
ಲಾರು ಮುಕ್ತಿಯನೈದುವರೊ ಅವರವರ ಕರವೊಯ್ದು
ಶೌರಿಪುರದೊಳಗಿಪ್ಪ ನದಿಯಲಿ
ಕಾರುಣಿಕ ಸುಸ್ನಾನ ನೀಪರಿ
ವಾರಸಹಿತದಿಮಾಡಿ ಹರಿಯುದರಪ್ರವೇಶಿಸುವ ೨೯

ವಾಸುದೇವನ ಉದರವಲ್ಲಿ ಪ್ರ
ವೇಶಗೈದಾನಂತರದಿ ನಿ
ರ್ದೋಷಮುಕ್ತರು ಉದರದಿಂ ಪೊರಮಟ್ಟು ಹರುಷದಲಿ
ಈಶನಿಂದಾಜ್ಞಯ ಪಡೆದಸಂ
ತಾಸನಸಿತ ದ್ವೀಪ ಮೋಕ್ಷದಿ
ವಾಸವಾಗಿ ವಿಮುಕ್ತದುಃಖರು ಸಂಚರಿಸುತಿಹರು ೪೦

ಸತ್ವಸತ್ವ ಮಹಾಸುಸೂಕ್ಷ್ಮವು
ಸತ್ವ ಸತ್ವಾತ್ಮಕ ಕಳೇವರ
ಸತ್ಯಲೋಕಾಧಿಪನೆನಿಪಗತ್ಯಲ್ಪವೆರಡುಗುಣ
ಮುಕ್ತಿಯೋಗ್ಯವಿದಲ್ಲಜಾಂಡೋ
ತ್ಪತ್ತಿ ಕಾರಣವಲ್ಲ ಹರಿಪ್ರೀ
ತ್ಯರ್ಥವಾಗೀ ಜಗದ ವ್ಯಾಪಾರಗಳ ಮಾಡುವನು ೪೧

ಪಾದನ್ಯೂನ ಶತಾಬ್ದ ಪರಿಯಂ
ತೋದಿ ಉಗ್ರತಪಾಹ್ವಯುದಿ ಲವ
ಣೋದಧಿಯೊಳಗೆ ಕಲ್ಪದಶತಪವಿದ್ದನಂತರದಿ
ಸಾಧಿಸಿದ ಮಹದೇವಪದ ವಾ
ರ್ಧಿವ ನವಕಲ್ಪಾವಸಾನಕ
ಐದುವನು ಶೇಷನಪದವ ಪಾರ್ವತಿಸಹಿತವಾಗಿ ೪೨

ಇಂದ್ರಮನು ದಶಕಲ್ಪಗಳಲಿ ಸು
ನಂದನಾಮದಿ ಶ್ರವಣಗೈದು ಮು
ಕುಂದನಪರೋಕ್ಷಾರ್ಥ ನಾಲ್ಕು ಸುಕಲ್ಪತಪವಿದು
ನೊಂದು ಪೂಗೆಯೊಳು ಕೋಟಿವರುಷ ಪು
ರಂದರನ ಪದವುಂಡ ನಂತರ
ಪೊಂದಿದನು ನಿಜಲೋಕ ಸುರಪತಿ ಕಾಮಸಿದರಂತೆ ೪೩

ಕರೆಸುವರು ಪೂರ್ವದಲಿ ಚಂದ್ರಾ
ರ್ಕರತಿ ಶಾಂತ ಸುರೂಪನಾಮದ
ಲೆರಡೆರಡು ಮನುಕಲ್ಪ ಶ್ರವಣವಗ್ನೈದು ಮನುಕಲ್ಪ
ವರತಪೋಬಲದಿಂದ ಲರ್ವಾಕ್
ಶಿರಗಳಾಗೀರೈದು ಸಾವಿರ
ವರುಷ ದುಃಖವನೀಗಿ ಕಾಂಬರು ಬಿಂಬರೂಪವನು ೪೪

ಸಾಧನಗಳಪರೋಕ್ಷ ನಂತರ
ಐದುವರು ಮೋಕ್ಷವನು ಶಿವ ಶ
ಕ್ರಾದಿ ದಿವಿಜರು ಉಕ್ತಕ್ರಮದಿಂಕಲ್ಪ ಸಂಖ್ಯೆಯಲಿ
ಐದಲೆಯಗೈವತ್ತು ಶೇಂದ್ರ ಸ
ಹೋದರನಿಗಿಪ್ಪತ್ತು ದ್ವಿನವತ್ಪ
ಗಾಧಿಪತಿ ಪ್ರಾಣನಿಗೆ ಗುರುಮುನಿಗಳಿಗೆ ಷೋಡಶವು ೪೫

ಪ್ರವಹ ಮಾರುತಗಷ್ಟನೈರಡು ನೈಂ
ಧವ ದಿವಾಕರ ಧರ್ಮರಿಗೆ ದಶ
ನವ ಸುಕಲ್ಪವು ಮಿತ್ರರಿಗೆ ಶೇಷಶತ ಜನಕೆಂಟು
ಕಪಿ ಸನಕನು ಸನಂದನ ಸನ
ತ್ಕುವರ ಮುನಿಗಳಿಗೇಳುವರುಣನ
ಯುವತಿ ಪರ್ಜನ್ಯಾದಿ ಪುಷ್ಕರಗಾರು ಕಲ್ಪದಲಿ ೪೬

ಐದು ಕರ್ಮಜ ಸುರರಿಗಾಜಾ
ನಾದಿಗಳಿಗೆರಡೆರಡು ಕಲ್ಪಾ
ಘಾದಿಕತ್ರಯ ಗೋಪಿಕಾಸ್ತ್ರೀಯ ರಿಗೆ ಪಿತೃತ್ರಯಪ್ಪ
ಈ ದಿವೌಕಸ ಮನುಜ ಗಾಯಕ
ರ್ಪ್ರಪವರು ಎರಡೊಂದುಕಲ್ಪ ನ
ರಾಧಿಪರಿಗರೆಕಲ್ಪದೊಳಗಪರೋಕ್ಷನಿರುತಿಹುದು ೪೭

ದೀಪಗಳನನುಸರಿಸಿ ದೀಪ್ತಿಯು
ವ್ಯಾಪಿಸಿ ಮಹಾತಿಮಿರ ಕಳದು ಪ
ರೋಪಕಾರವ ಮಾಳ್ಪ ತೆರದಂದದಲಿ ಪರಮಾತ್ಮ
ಆ ಪಯೋಜಾಸನನೊಳಿದ್ದು ಸ್ವ
ರೂಪಶಕ್ತಿಯ ವ್ಯಕ್ತಿಗೈಸುತ
ತಾ ಪೊಳವನನವರಂತೆ ಚೇಷ್ಟೆಯಮಾಡಿ ಮಾಡಿಸುತ ೪೮

ಸ್ವೋದರಸ್ಥಿತ ಪ್ರಾಣ ರುದ್ರೇಂ
ದ್ರಾದಿಸುರರಿಗೆ ದೇಹಗಳ ಕೊ
ಟ್ಟಾದರದಲವರವರ ಸೇವೆಯಕೊಂಬ ನನವರತ
ನೋದಬೋಧದಯಾಬ್ಧಿ ತನ್ನವ
ರಾಧಿವ್ಯಾಧಿಯ ಕಳೆದು ಮಹದಪ
ರಾಧ ।ಳ ನೋಡದಲೆ ಸಲಹುವ ಸತತ ಸ್ಮರಿಸುವರ ೪೯

ಪ್ರತಿಪ್ರತೀ ಕಲ್ಪದಲಿ ಸೃಷ್ಟಿ
ಸ್ಥಿತಿಲಯವ ಮಾಡುತಲಿ ಮೋದಿಪ
ಚತುರಮುಖ ಪವಮಾನರನ್ನವಮಾಡಿ ಭಂಜಿಸುವ
ಘೃತವೆ ಮೃತ್ಯುಂಜಯನೆನಿಪ ದೇ
ವತೆಗಳೇ ಉಪಸೇಚನರು ಶ್ರೀ
ಪತಿಗೆ ಮೂಜಗವೆಲ್ಲಪೋದನತಿಥಿಯೆನಿಸಿಕೊಂಬ ೫೦

ಗರ್ಭಿಣಿಸ್ತ್ರೀವುಂಡ ಭೋಜನ
ಗರ್ಭಗತ ಶಿಶುವುಂಬ ತೆರದಲಿ
ನಿರ್ಭಯನು ತಾನುಂಡುಣಿಸುವನು ಸರ್ವಜೀವರಿಗ
ನಿರ್ಬಲತಿ ಪರಮಾಣು ಜೀವಗೆ
ಹಬ್ಬವುದೆ ಸ್ಥೂಲಾನ್ನ ಭೋಜನ
ವರ್ಭಕರು ಪೇಳುವರು ಕೋವಿದರಿದನೊಡಂಬಡರು ೫೧

ಅಪಚಯಗಳಿಲ್ಲುಂಡುವದರಿಂ
ದುಪಚಯಗಳಿಲ್ಲಮರಣದೊಳ
ಗುಪಮರೆನಿಸುವರಿಲ್ಲ ಜನುಮಾದಿಗಳು ಮೊದಲಿಲ್ಲ
ಅಪರಿಮಿತ ಸನ್ಮಹಿಮ ನರಹರಿ
ಯಪುನರಾವರ್ತನರಮಾಡುವ
ಕೃಪಣ ವತ್ಸಲ ಸ್ವಪದ ಸೌಖ್ಯವನಿತ್ತು ಶರಣರಿಗೆ ೫೨

ಬಿತ್ತಿ ಬೀಜವ ಭೂಮಿಯೊಳು ನೀ
ರೆತ್ತಿ ಬೆಳೆಸಿದ ಬೆಳಸು ಪ್ರಾಂತಕೆ
ಕಿತ್ತು ಮೆಲುವಂದದಲಿ ಲಕುಮಿರಮಣ ಲೋಕಗಳ
ಮತ್ತೆ ಜೀವರ ಕರ್ಮಕಾಲೋ
ತ್ಪತ್ತಿ ಸ್ಥಿತಿಲಯ ಮಾಡುತಲಿ ಸಮ
ವರ್ತಿಯೆನಿಸುವ ಖೇದಮೋದಗಳಿಲ್ಲವನವರತ ೫೩

ಶ್ವಸನ ರುದ್ರೇಂದ್ರ ಪ್ರಮುಖ ಸುಮ
ನಸರೊಳಿದ್ದರು ಕ್ಷುತ್ಪಿಪಾಸಗ
ಳೂಶದೊಳಿಪ್ಪುವು ಸಕಲ ಭೋಗಕೆ ಸಾಧನಗಳಾಗಿ
ಅಸುರ ಪ್ರೇತ ಪಿಶಾಚಗಳ ಬಾ
ಧಿಸುತಲಿಪ್ಪುವು ದಿನದಿನದಿ ಮಾ
ನಿಸರೊಳಗೆ ಮೃಗಪಕ್ಷಿ ಜೀವರೊಳಿದ್ದು ಪೋಗುವುವು ೫೪

ವಾಸುದೇವಗೆ ಸ್ವಪ್ನಸುಪ್ತಿ ಪಿ
ಪಾಸ ಕ್ಷುಧೆ ಭಯಶೋಕ ಮೋಹಾ
ಯಾಸಪಸ್ಮೃತಿ ಮಾತ್ಸರಿಯ ಮದ ಪುಣ್ಯಪಾಪಾದಿ
ದೋಷವರ್ಜಿತನೆಂದು ಬ್ರಹ್ಮಸ
ದಾಶಿವಾದಿ ಸಮಸ್ತ ದಿವಿಜರು
ಪಾಸನೆಯಗೈದೆಲ್ಲಕಾಲದಿ ಮುಕ್ತರಾಗಿಹರು ೫೫

ಪರಮಸೂಕ್ಷ್ಮ ಕ್ಷಣವಯಿದು ತೃಟಿ
ಕರೆಸುವುದು ಐವತ್ತು ತೃಟಿಲವ
ವೆರಡುಲವ ನಿಮಿಷಗಳು ನಿಮಿಷಗಳೆಂಟು ಮಾತ್ರಯುಗ
ಗುರುದಶ ಪ್ರಾಣಾರುಪಳಹ
ನ್ನೆರಡು ಬಾಣವು ಘಳಿಗೆ ತ್ರಿಂಶತಿ
ಇರುಳು ಹಗಲರವತ್ತು ಘಟಿಕೆಗಳಹೋರಾತ್ರಿಗಳು ೨೬

ಈ ದಿವಾರಾತ್ರಿಗಳೆರಡು ಹದಿ
ನೈದು ಪಕ್ಷಗಳೆರಡು ಮಾಸಗ
ಳಾದವುವು ಮಾಸದ್ವಯವೆ ಋತು ಋತುತ್ರಯಗಳಯ ನ
ಐದುವುವು ಆಯನದ್ವಯಾಬ್ದ ಕೃ
ತಾದಿಯುಗಗಳು ದೇವಮಾನದಿ
ದ್ವಾದಶಸ್ಸಾಹಸ್ರ ವರುಷಗಳದನು ಪೇಳುವನು ೨೭

ಚತುರಸಾವಿರದೆಂಟುನೂರವು
ಕೃತಯುಗಕೆ ತ್ರಿಸಹಸ್ರ ಸಲೆ ಷಟ್
ಶತವು ತ್ರೇತೆಗೆ ದ್ವಾಪರಕೆದ್ವಿಸಹಸ್ರ ನಾನ್ನೂರು
ದಿತಿಜಪತಿ ಕಲಿಯುಗಕೆ ಸಾವಿರ
ಶತಗಳದ್ವಯಕೂಡಿ ಈ ದೇ
ವತೆಗಳಿಗೆ ಹನ್ನೆರಡು ಸಾವಿರವಹವು ವರುಷಗಳು ೨೮

ಪ್ರಥಮಯುಗ ಕೇಳೆಧಿಕವರವಿಂ
ಶತಿಸುಲಕ್ಷಾಷ್ಟೋತ್ತರಶತವಿಂ
ಶತಿಸಹಸ್ರಮನುಷ್ಯ ಮಾನಾಬ್ದಗಳು ಷಣ್ಣವತಿ
ಮಿತಸಹಸ್ರದ ಲಕ್ಷದ್ವಾದಶ
ದ್ವಿತಿಯೆ ತೃತಿಯಕೆ ಎಂಟು ಲಕ್ಷದ
ಚತುರಷಷ್ಟಿಸಹಸ್ರ ಕಲಿಗಿದರರ್ಧ ಚಿಂತಿಪುದು ೨೯

ಮೂರಧಿಕ ನಾಲ್ವತ್ತು ಲಕ್ಷದ
ಲಾರುಮೂರೆರಡಧಿಕ ಸಾವಿರ
ವೀರೆರಡು ಯುಗ ವರುಷ ಸಂಖ್ಯೆಯು ಗೈಯಲೆನಿತಿಹುದೊ
ಸೂರಿಪೆಚ್ಚಿನೆ ಸಾವಿರದ ನಾ
ನ್ನೂರು ಮೂವತ್ತೆರಡು ಕೋಟಿ ಸ
ರೋರುಹಾಸನಗಿದು ದಿವಸವೆಂಬರು ವಿಪಶ್ಚಿತರು ೬೦

ಶತಧೃತಿಗೆ ಈ ದಿವಸಗಳ ತ್ರಿಂ
ಶತಿಯು ಮಾಸದ್ವಾದಶಾಬ್ದವು
ಶತವೆರಡರೊಳು ಸರ್ವಜೀವೋತ್ಪತ್ತಿ ಸ್ಥಿತಿಲಯವು
ಶ್ರುತಿಸ್ಮೃತಿಗಳು ಪೇಳುತಿಹವ
ಚ್ಯುತಗೆ ನಿಮಿಷವಿದೆಂದು ಸುಖಶಾ
ಶ್ವತಗೆ ಪಾಸಟಿಯೆಂಬುವರೆ ಬ್ರಹ್ಮಾದಿ ದಿವಿಜರನು ೬೧

ಆದಿಮಧ್ಯಾಂತಗಳು ಇಲ್ಲದ
ಮಾಧವಗಿದುಪಚಾರವೆಂದು ಋ
ಗಾದಿ ವೇದಪುರಾಣಗಳು ಪೇಳುವವು ನಿತ್ಯದಲಿ
ಮೋದಮಯನಾನುಗ್ರಹವ ಸಂ
ಪಾದಿಸಿ ರಮಾಬ್ರಹ್ಮರುದ್ರೇಂ
ದ್ರಾದಿಗಳು ತಮತಮ್ಮ ಪದವಿಯನೈದಿ ಸುಖಿಸುವರು ೬೨

ಈ ಕಥಾಮೃತಪಾನ ಸುಖ ವಿ
ವೇಕಿಗಳಿಗಲ್ಲದಲೆ ವೈಷಿಕ
ವ್ಯಾಕುಲ ಕುಚಿತ್ತರಿಗೆ ದೊರೆವುದೆ ಯಾವಕಾಲದಲಿ
ಲೋಕವಾರ್ತೆಯಬಿಟ್ಟು ಇದನವ
ಲೋಕಿಸುತ ಮೋದಿಪರಿಗೊಲಿದು ಕೃ
ಪಾಕರ ಜಗನ್ನಾಥವಿಠ್ಠಲ ಕಾಯ್ವ ಕರುಣದಲಿ ೬೩

ಅಂತು ಸಂಧಿ ೨೩ಕ್ಕೆ ಪದ್ಯಗಳು ೭೨೨ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

## ಸಂಧಿ ೨೪ "ಕ್ರೀಡಾವಿಲಾಸ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಶ್ರೀನಿವಾಸನ ಚರಿತೆಗಳ ಪರ
ಮಾನುರಾಗದಿ ಬೆಸಗೊಳಲು ಮುನಿ
ಶೌನಕಾದ್ಯರಿಗರುಹಿದನು ಸೂತಾರ್ಯದಯದಿಂದ—ಸಂಧಿಸೂಚನೆ

ಪಚನ ಭಕ್ಷಣ ಗಮನ ಭೋಜನ
ವಚನ ಮೈಥುನ ಶಯನ ವೀಕ್ಷಣ
ವಚಲನಾಚಲನ ಪ್ರಯತ್ನವು ಸಾಧ್ಯವೇ ಜನಕೆ
ಶುಚಿಸದನ ದಯದಿಂದ ಜೀವರ
ನಿಚಯದೊಳು ತಾನಿಂತು ಮಾಡುವ
ನುಚಿತವನುಚಿತಕರ್ಮಗಳನೆಂದರಿವು ಕೊಂಡಾಡು ೧

ವಿಷ್ಟರಶ್ರವ ದೇಹದೊಳಗೆ ಪ್ರ
ವಿಷ್ಟನಾಗಿ ನಿರಂತರದಿ ಬಹು
ಚೇಷ್ಟೆಗಳ ಮಾಡುತಿರೆ ಕಂಡು ಸಜೀವಿಯೆನುತಿಹರು
ಹೃಷ್ಟರಾಗುವರವರ ನೋಡಿ ಕ
ನಿಷ್ಟರೆಲ್ಲರು ಸೇವೆ ಮಾಳ್ಪರು
ಬಿಟ್ಟಕ್ಷಣದಲಿ ಕುಣಪನೆಂದರಿದದನುಪೇಕ್ಷಿಪರು ೨

ಕ್ರೀಡೆಗೋಸುಗ ಅವರವರ ಗತಿ
ನೀಡಲೋಸುಗ ದೇಹಗಳ ಕೊ
ಟ್ಟಾಡುವನು ಸ್ವೇಚ್ಛೆಯಲಿ ಬ್ರಹ್ಮೇಶಾದ್ಯರೊಳು ಪೊಕ್ಕು
ಮಾಡುವನು ವ್ಯಾಪಾರ ಬಹುವಿಧ
ಮೂಢ ದೈತ್ಯರೊಳಿದ್ದು ಪ್ರತಿದಿನ
ಕೇಡು ಲಾಭಗಳಿಲ್ಲ ವಿದನರಿದಾವಕಾಲದಲಿ ೩

ಅಕ್ಷರೇಡ್ಯನು ಬ್ರಹ್ಮವಾಯು
ತ್ರ್ಯಕ್ಷಸುರಪ ಸುರಾಸುರರ ಅ
ಧ್ಯಕ್ಷನಾಗಿದ್ದೆಲ್ಲರೊಳು ವ್ಯಾಪಾರಮಾಡುತಿಹ
ಅಕ್ಷಯನು ಸತ್ಯಾತ್ಮಕ ಪರಾ
ಪೇಕ್ಷೆಯಿಲ್ಲದೆ ಸರ್ವರೊಳಗೆ ವಿ
ಲಕ್ಷಣನು ತಾನಾಗಿ ಲೋಕವ ರಕ್ಷಿಸುತಲಿಪ್ಪ ೪

ಶ್ರೀ ಸರಸ್ವತಿ ಭಾರತೀ ಗಿರಿ
ಜಾಶಚೀರತಿ ರೋಹಿಣೀ ಸಂ
ಜ್ಞಾಶತ ಸುರೂಪಾದ್ಯಖಿಳ ಸ್ತ್ರೀಯರೊಳು ಸ್ತ್ರೀರೂಪ
ವಾಸವಾಗಿದ್ದೆಲ್ಲರಿಗೆ ವಿ
ಶ್ವಾಸ ತನ್ನಲಿ ಕೊಟ್ಟು ಅವರಭಿ
ಲಾಷೆಗಳ ಪೂರೈಸುತಿಪ್ಪನು ಯೋಗ್ಯತಗಳರಿತು ೫

ಕೋಲುಕುದುರೆಯ ಮಾಡಿ ಆಡುವ
ಬಾಲಕರ ತೆರನಂತೆ ಲಕುಮಿ
ಲೋಲಸ್ವಾತಂತ್ರ್ಯಯ ಗುಣವ ಬ್ರಹ್ಮಾದ್ಯರೊಳಗಿಟ್ಟು
ಲೀಲೆಗೈವನು ತನ್ನವರಿಗನು
ಕೂಲನಾಗಿದ್ದೆಲ್ಲ ಕಾಲದಿ
ಖೂಳರಿಗೆ ಪ್ರತಿಕೂಲನಾಗಿಹ ಪ್ರಕಟನಾಗದಲೆ ೬

ಸೌಪರಣಿ ವರವಹನ ನಾನಾ
ರೂಪನಾಮದಿ ಕರೆಸುತವರ ಸ
ಮೀಪದೊಳಗಿದ್ದಖಿಳವ್ಯಾಪಾರಗಳ ಮಾಡುವನು
ಪಾಪಪುಣ್ಯಗಳೆರಡನವರ ಸ್ವ
ರೂಪಗಳನನುಸರಿಸಿ ಉಣಿಪ ಪ
ಮೋಪಕಾರಿ ಪರೇಶಪೂರ್ಣಾನಂದ ಜ್ಞಾನಘನ ೭

ಅಹರ ನಿದ್ರಾ ಮೈಥುನಗಳಹ
ರಹರಬಯಸಿ ಬಳಲುವ ಲಕ್ಷ್ಮೀ
ಮಹಿತನ ಮಹಾಮಹಿಮೆಗಳ ನೆಂತರಿವ ನಿತ್ಯದಲಿ
ಅಹಿಕ ಸೌಖ್ಯವ ಮರೆದು ಮನದಲಿ
ಗ್ರಹಿಸಿ ಶಾಸ್ತ್ರಾರ್ಥಗಳ ಪರಮೋ
ತ್ಸಾಹದಿ ಕೊಂಡಾಡುತಲಿ ಮೈಮರೆದವರಿಗಲ್ಲದಲೆ ೮

ಬಂಧ ಮೋಕ್ಷ ಪ್ರದನ ಜ್ಞಾನವು
ಮಂದಮತಿಗಳಿಗೆಂದು ದೊರೆವುದು
ಬಿಂದುಮಾತ್ರ ಸುಖಾನುಭವ ಪರ್ವತಕೆ ಸಮುದ್ರವು
ಎಂದು ತಿಳಿಯದಲನ್ಯದೈವಗ
ಳಿಂದ ಸುಖವಾಪೇಕ್ಷಿಸುವರು ಮು
ಕುಂದ ನಾರಾಧನೆಯ ಬಿಟ್ಟವಗುಂಟೆ ಮುಕ್ತಿಸುಖ ೯

ರಾಜತನ್ನಾಮಾತ್ಯ ಕರುಣದಿ
ನ್ನಾಜನರಿಗೆ ಕೊಟ್ಟ ಕಾರ್ಯನಿ
ಯೋಜಿಸುವ ಮಾನಾಪಮಾನವ ಮಾಳ್ಪ ತೆರನಂತೆ
ಶ್ರೀ ಜನಾರ್ದನ ಸಕಲರೊಳಗಪ
ರಾಜಿತನು ತಾನಾಗಿ ಸರ್ವಪ್ರ
ಯೋಜನವ ಮಾಡಿಸುತ ಮಾಡುವ ಫಲಕೆ ಗುರಿಮಾಡಿ ೧೦

ವಾಸುದೇವ ಸ್ವತಂತ್ರವ ಸರೋ
ಜಾಸನಾದ್ಯಮರಾಸುರರಿಗಿಯ
ಲೋಸುಗರ್ಧವ ತೆಗೆದು ಅವರೊಳಗರ್ಧ ಚತುರ್ಭಾಗ
ಗೈಸಿ ಒಂದನು ಶತವಿಧದ್ವಿಪಂ
ಚಾಶತಾಬ್ಜಜಗಪ್ಪಚತ್ವಾ
ರಿಂಶವನಿಳನಿಗಿತ್ತು ವಾಣೀ ಭಾರತೀಗರ್ಧ ೧೧

ದ್ವಿತಿಯಭಾಗವ ತೆಗೆದುಕೊಂಡದ
ಶತವಿಭಾಗವ ಮಾಡಿ ತಾನಿಂ
ಶತಿಯುಮೇಶನೊಳಿಟ್ಟು ಇಂದ್ರನೊಳೈದಧಿಕ ಹತ್ತು
ರತಿಪನೊಳಗಿನಿತಿಟ್ಟಖಿಳದೇ
ವತೆಗಳೊಳಗೀರ್ಕೈದು ಜೀವ
ಪ್ರತತಿಯೊಳು ದಶವೈದಧಿಕ ನಾಲ್ವತ್ತು ದೈತ್ಯರೊಳು ೧೨

ಕಾರುಣಿಕ ಸ್ವಾತಂತ್ರ್ಯತ್ವವ
ಮೂರುವಿಧಗೈಸಿರಡು ತನ್ನೊಳು
ನಾರಿಗೊಂದನು ಕೊಟ್ಟು ಸ್ವಾತಂತ್ರ್ಯವ ಸರ್ವರಿಗೆ
ಧಾರುಣಿಪ ತನ್ನಣುಗರಿಗೆ ವ್ಯಾ
ಪಾರಕೊಟ್ಟು ಗುಣಾಗುಣಗಳ ವಿ
ಚಾರ ಮಾಡುವತೆರದಿ ತ್ರಿಗುಣವ ವ್ಯಕ್ತಿಯನೆಮಾಳ್ಪ ೧೩

ಪುಣ್ಯಕರ್ಮ ಸಹಾಯವಾಗುವ
ಧನ್ಯರಿಗೆ ಕಲ್ಯಾದಿದೈತ್ಯರ
ಪುಣ್ಯಫಲಗಳ ನೀವದಿವಿಜರ ಪಾಪಕರ್ಮಫಲ
ಅನ್ಯ ಕರ್ಮವ ಮಾಳ್ಪರಿಗೆ ಅನು
ಗುಣ್ಯ ಜನರಿಗೆ ಕೊಡುವ ಬಹುಕಾ
ರುಣ್ಯಸಾಗರ ನೀತೆರದಿ ಭಕ್ತರನು ಸಂತೈಪ ೧೪

ನಿರುಪಮಗೆ ಸರಿಯುಂಟು ಎಂದು
ಚ್ಚರಿಸುವವ ತದ್ಭಕ್ತರೊಳು ಮು
ಚ್ಚರಿಸುವವ ಗುಣಗುಣಿಗಳಿಗೆ ಭೇದಗಳ ಪೇಳುವವ
ವರಸುದರ್ಶನ ಊರ್ಧ್ವಪುಂಡ್ರವ
ಧರಿಸಿದವರೊಳು ದ್ವೇಷಿಸುವ ಹರಿ
ಚರಿತೆಗಳ ಕೇಳದಲೆ ಲೋಗರವಾರ್ತೆ ಕೇಳುವವ ೧೫

ಏವಮಾದಿ ದ್ವೇಷವುಳ್ಳಸು
ಜೀವರೆಲ್ಲರು ದೈತ್ಯರಂಬರು
ಕೋವಿದರ ವಿಜ್ಞಾನ ಕರ್ಮವ ನೋಡಿ ನಿಂದಿಪರು
ದೇವದೇವನ ಬಿಟ್ಟು ಯಾವ
ಜ್ಜೀವ ಪರಿಯಂತರದಿ ತುಚ್ಛರ
ಸೇವೆಯಿಂದುಪಜೀವಿಸುವರಜ್ಞಾನಕೊಳಗಾಗಿ ೧೬

ಕಾಮ ಲೋಭ ಕ್ರೋಧ ಮದಹಿಂ
ಸಾಮಯಾನೃತ ದಂಭ ಕಪಟತ್ರಿ
ಧಾಮನವತಾರಗಳ ಭೇದವ ಪೂರ್ಣ ಸುಖಬದ್ಧ
ಆಮಿಷನಿವೇದಿತವಭೋಜ್ಯತಿ
ತಾವ ಸಾನ್ನವ ನುಂಬತಾಮಸ
ರೀ ಮದಾಂಧರ ಸಂಗದಿಂದಲಿ ತಮವ ವರ್ಧಿಪುದು ೧೭

ಜ್ಞಾನಭಕ್ತಿ ವಿರಕ್ತಿ ವಿನಯಪು
ರಾಣಶಾಸ್ತ್ರ ಶ್ರವಣ ಚಿಂತನ
ದಾನ ಶಮದಮಯಜ್ಞ ಸತ್ಯಾಹಿಂಸ ಭೂತದಯಾ
ಧ್ಯಾನ ಭಗವನ್ನಾಮಕೀರ್ತನ
ಮೌನಜಪ ತಪ ವ್ರತಸುತೀರ್ಥ
ಸ್ನಾನ ಮಂತ್ರ ಸ್ತೋತ್ರ ವಂದನ ಸಜ್ಜನರ ಗಣವ ೧೮

ಲೇಶಸ್ವಾತಂತ್ರ್ಯ ಗುಣವನು ಪ್ರ
ವೇಶ ಗೈಸಿದ ಕಾರಣದಿ ಗುಣ
ದೋಷಗಳು ತೋರುವವು ಸತ್ವಾಸತ್ವ ಜೀವರೊಳು
ಶ್ವಾಸಭೋಜನ ಪಾನಶಯನವಿ
ಲಾಸ ಮೈಥುನ ಗಮನ ಹರ್ಷ
ಕ್ಲೇಶ ಸ್ವಪ್ನಸುಷುಪ್ತಿ ಜಾಗ್ರತೆಯಹವು ಚೇತನಕೆ ೧೯

ಅರ್ಧತನ್ನೊಳಗಿರಿಸಿ ಉಳಿದೊಂ
ದರ್ಧವ ವಿಭಾಗವಗೈಸಿ ವೃಜಿ
ನಾರ್ದನನು ಪೂರ್ವದಲಿ ಸ್ವಾತಂತ್ರ್ಯವನ ಕೊಟ್ಟಂತೆ
ಸ್ವರ್ಧುನೀಪಿತ ಕೊಡುವವರಸುಖ
ವರ್ಧಿಗೋಸುಗ ಬ್ರಹ್ಮವಾಯು ಕ
ಪರ್ದಿಮೊದಲಾದವರೊಳಿದ್ದವರ್ಯೋಗ್ಯತೆಯನರಿತು ೨೦

ಹಲಧರಾನುಜ ಮಾಳ್ಪ ಕೃತ್ಯವ
ತಿಳಿಯದಲಹಂಕಾರದಿಂದೆ
ನ್ನಳಿದು ವಿಧಿಯು ನಿಷೇಧ ಪಾತ್ರರು ಇಲ್ಲವೆಂಬುವಗೆ
ಫಲಗಳದ್ವಯಕೊಡುವ ದೈತ್ಯರ
ಕಲುಷಕರ್ಮವ ಬಿಟ್ಟು ಪುಣ್ಯವ
ಸೆಳೆದು ತನ್ನೊಳಗಿಟ್ಟು ಕ್ರಮದಿಂ ಕೊಡುವ ಭಕುತರಿಗೆ ೨೧

ತೋಯಜಾಪ್ತನ ಕಿರಣವೃಕ್ಷ
ಚ್ಛಾಯ ವರ್ತಿಸುವಂತೆ ಕಮಲದ
ಳಾಯತಾಕ್ಷನು ಸರ್ವರೊಳು ವ್ಯಾಪಿಸಿದ ಕಾರಣದಿ
ಹೇಯ ಸದ್ಗುಣಕರ್ಮ ತೋರ್ಪವು
ನ್ಯಾಯ ಕೋವಿದರಿಗೆ ನಿರಂತರ
ಶ್ರೀಯರಸ ಸರ್ವೋತ್ತಮೋತ್ತಮನೆಂದು ಪೇಳುವರು ೨೨

ಮೂಲಕಾರಣ ಪ್ರಕೃತಿಯೆನಿಪ ಮ
ಹಾಲಕುಮಿ ಎಲ್ಲರೊಳಗಿದ್ದು ಸು
ಲೀಲೆಗೈಯುತ ಪುಣ್ಯಪಾಪಗಳರ್ಪಿಸಲು ಪತಿಗೆ
ಪಾಲಗಡಲೊಳು ಬಿದ್ದ ಜಲಕೀ
ಲಾಲವೆನಿಪುದೆ ಜೀವಕೃತ ಕ
ರ್ಮಾಳಿ ತದ್ವತು ಶುಭವು ಎನಿಪುದು ಸರ್ವಕಾಲದಲಿ ೨೩

ಜ್ಞಾನಸುಖಬಲ ಪೂರ್ಣ ವಿಷ್ಣುವಿ
ಗೇನು ಮಾಳ್ಪವು ತ್ರಿಗುಣಕಾರ್ಯಕೃ
ಶಾನುವಿನ ಕ್ರಿಮಿಕವಿದು ಭಕ್ಷಿಪುದುಂಟೆ ಲೋಕದೊಳು
ಈ ನಳಿನಜಾಂಡವನು ಬ್ರಹ್ಮೇ
ಶಾನ ಮುಖ್ಯಸುರಾಸುರರ ಕಾ
ಲಾನಲನವೋಲ್ನುಂಗುವನಿಗೀ ಪಾಪಗಳ ಭಯವೇ ೨೪

ಮೋದಶಿರದಕ್ಷಿಣಃಪಕ್ಷ ಪ್ರ
ಮೋದ ಉತ್ತರಪಕ್ಷವೆಂದು ಋ
ಗಾದಿಶ್ರುತಿಗಳು ಪೇಳುವುವು ಆನಂದಮಯ ಹರಿಗೆ
ಮೋದವೈಷಿಕ ಸುಖವಿಶೇಷ ಪ್ರ
ಮೋದಪಾರತ್ರಿಕ ಸುಖಪ್ರದ
ನಾದಕಾರಣದಿಂದ ಮೋದ ಪ್ರಮೋದ ನೆನಿಸಿದನು ೨೫

ಎಂದಿಗಾದರು ವೃಷ್ಟಿಯಿಂದ ವ
ಸುಂಧರೆಯೊಳಿಪ್ಪಖಿಳಜಲದಿಂ
ಸಿಂಧುವೃದ್ಧಿಯ ನೈದುವುದೆ [illegible] ಬರಿದಹುದೆ
ಕುಂದುಕೊರತೆಗಳಿಲ್ಲದಿಹ ಸ್ವಾ[illegible]
ನಂದಸಂಪೂರ್ಣ ಸ್ವಭಾವಗೆ [illegible]
ಬಂದು ಮಾಡುವುದೇನು [illegible]ರ್ಮ ಜನ್ಯಫಲ ೨೬

ದೇಹವೃಕ್ಷದೊಳೆರಡು ಪಕ್ಷಿಗ
ಳೀಹವೆಂದಿಗು ಬಿಡದೆ ಪರಮ
ಸ್ನೇಹದಿಂದಲಿ ಕರ್ಮಜ ಫಲಗಳುಂಬ ಜೀವಖಗ
ಶ್ರೀಹರಿಯು ತಾ ಸಾರಭೋಕ್ತನು
ದ್ರೋಹಿಸುವ ಕಲ್ಯಾದಿ ದೈತ್ಯಸ
ಮೂಹಕೀವ ನಿಶಿಷ್ಟಪಾಪವ ಕ್ಲೇಶವೆಲ್ಲರಿಗೆ ೧೭

ದ್ಯುಮಣಿ ಕಿರಣವಕಂಡಮಾತ್ರದಿ
ತಿಮಿರವೋಡುವ ತೆರದಿ ಲಕ್ಷ್ಮೀ
ರಮಣ ನೋಡಿದ ಮಾತ್ರದಿಂದಘ ನಾಶವೈದುವುದು
ಕಮಲಸಂಭವ ಮುಖ್ಯ ಎಲ್ಲಾ
ಸುಮನಸರೊಳಿಹ ಪಾಪರಾಶಿಯು
ಸಮರಮುಖ ನಂದದಲಿ ಭಸ್ಮವಮಾಳ್ಪ ಹರಿತಾನು ೧೮

ಚತುರದಶ ಭಾಗದಿ ದಶಾಂಶದೊ
ಳಿತರ ಜೀವರಿಗೀವ ಲೇಶದ
ದಿತಿಜದೇವರ್ಕಳಿಗೆ ಕೊಡುವ ನಿಶಿಷ್ಟ ಸುಖದುಃಖ
ಮತಿವಿಹೀನ ಪ್ರಾಣಿಗಳಿಗಾ
ಹುತಿಯಸುಖ ಪ್ರಾಪ್ತಿದ ದುಃಖವರಯೋ
ಗ್ಯತೆಯನರಿದು ಪಿಪೀಲ ಮಶಕಾದಿಗಳಿಗೀವ ಹರಿ ೧೯

ನಿತ್ಯನಿರಯಾಂಧಾಖ್ಯಕೂಪದಿ
ಭೃತ್ಯರಿಂದೊಡಗೂಡಿ ಪುನರಾ
ವರ್ತಿವರ್ಜಿತ ಲೋಕವೈದುವ ಕಲಿಯು ದ್ವೇಷದಲಿ
ಸತ್ಯಲೋಕಾಧಿಪ ಚತುರ್ಮುಖ
ತತ್ವದೇವರ್ಕಳ ಸಹಿತ ನಿಜ
ಮುಕ್ತಿಯೈದುವಹರಿಪದಾಬ್ಜವ ಭಜಿಸಿ ಭಕುತಿಯಲಿ ೨೦

ವಿಧಿನಿಷೇಧಗಳೆರಡು ಮರೆಯದೆ
ಮಧುವಿರೋಧಿಯ ಪಾದಕರ್ಪಿಸ
ಲದಿತಿ ಮಕ್ಕಳಿಗೀವ ಪುಣ್ಯವ ಪಾಪದೈತ್ಯರಿಗೆ
ಸುದರುಶನಧರಗೀಯದಿರೆ ಬಂ
ದೊದಗಿ ವೈವರು ಪುಣ್ಯದೈತ್ಯರು
ಅಧಿಪರಿಲ್ಲದ ವೃಕ್ಷಗಳ ಫಲದಂತೆ ನಿತ್ಯದಲಿ ೩೦

ತಿಲಜ ಕಶ್ಮಲ ತ್ಯಜಿಸಿ ದೀಪವು
ತಿಳಿಯ ತೈಲವ ಗ್ರಹಿಸಿ ಮಂದಿರ
ದೊಳಗೆ ವ್ಯಾಪಿಸಿ ಇಪ್ಪಕತ್ತಲೆ ಭಂಗಿಸುವ ತೆರದಿ
ಕಲಿ ಮೊದಲುಗೊಂಡಖಿಳದಾನವ
ಕುಲಜರನುದಿನ ಮಾಳ್ಪ ಪುಣ್ಯಜ
ಫಲವ ಬ್ರಹ್ಮಾದ್ಯರಿಗೆ ಕೊಟ್ಟಲ್ಲಲ್ಲೆ ರಮಿಸುವನು ೩೧

ಇದ್ದಲೆಯು ನಿತ್ಯದಲಿ ಮೇಧ್ಯಾ
ಮೇಧ್ಯ ವಸ್ತುಗಳುಂಡು ಲೋಕದಿ
ಶುದ್ಧ ಶುಚಿಯೆಂದೆನಿಸಿಕೊಂಬನು ವೇದಸ್ಮೃತಿಗಳೊಳು
ಬುದ್ಧಿಪೂರ್ವಕವಾಗಿ ವಿಬುಧರು
ಶ್ರದ್ಧೆಯಿಂದರ್ಪಿಸಿದ ಕರ್ಮನಿ
ಷಿದ್ಧವಾದರು ಸರಿಯೆ ಕೈಕೊಂಡುದ್ಧರಿಸುತಿಪ್ಪ ೩೨

ಒಡೆಯರಿದ್ದ ವನಸ್ಥಫಲಗಳ
ಬಡಿದು ತಿಂಬುವರುಂಟೆ ಕಂಡರೆ
ಹೊಡೆದು ಬಿಸುಡುವರೆಂಬ ಭಯದಿಂ ನೋಡಲಂಜುವರು
ಬಿಡದೆ ಮಾಡುವ ಕರ್ಮಗಳು ಮನೆ
ಮಡದಿ ಮಕ್ಕಳು ಬಂಧುಗಳು ಕಾ
ರೊಡಲನಾಳುಗಳೆಂದ ಮಾತ್ರದಲೋಡುವುದು ದುರಿತ ೩೩

ಜ್ಞಾನಕರ್ಮೇಂದ್ರಿಯಗಳಿಂದೇ
ನೇನು ಮಾಡುವ ಕರ್ಮಗಳು ಲ
ಕ್ಷ್ಮೀನಿವಾಸನಿಗರ್ಪಿಸುತಲಿರು ಕಾಲ ಕಾಲದಲಿ
ಪ್ರಾಣಪತಿ ಕೈಕೊಂಡು ನಾನಾ
ಯೋನಿಯೈದಿಸನೊಮ್ಮೆ ಕೂಡದಿರೆ
ದಾನವರು ಸೆಳೆದೊಯ್ವರೆಲ್ಲಾ ಪುಣ್ಯರಾಸಿಗಳು ೩೫

ಶ್ರುತಿಸ್ಮೃತ್ಯರ್ಥಗಳನು ತಿಳಿದಹಂ
ಮತಿವಿಶಿಷ್ಟನು ಕರ್ಮಮಾಡಲು
ಪ್ರತಿಗ್ರಹಿಸನೈಪಾಪಗಳ ಕೊಡುತಿಪ್ಪ ನಿತ್ಯಹರಿ
ಚತುರದಶ ಭುವನಾದಿ ಪಾಲಿತ್ಯಕೃತ
ಕೃತಜ್ಞನಿಯ್ಯಾಮಕನು ಎಂತೆನೆ
ಮತಿಭ್ರಮಿಶ ಪ್ರಮಾದಿ ಸಂಕಟ ದೋಷವವಗಿಲ್ಲ ೩೬

ವಾರಿಜಾಸನ ಮುಖ್ಯ ರಾಜ್ಞಾ
ಧಾರಕರು ಸರ್ವ ಸ್ವತಂತ್ರ ರ
ಮಾರಮಣನೆಂದರಿತು ಇಷ್ಟಾನಿಷ್ಟ ಕರ್ಮಫಲ
ಸಾರಭೋಕ್ತನಿಗರ್ಪಿಸಲು ಸ್ವೀ
ಕಾರಮಾಡುವ ಪಾಪಫಲವ ಕು
ಬೇರ ನಾಮಕ ದೈತ್ಯರಿಗೆ ಕೊಟ್ಟವರ ನೋಯಿಸುವ ೩೭

ಕ್ರೂರ ದೈತ್ಯರೊಳಿದ್ದು ತಾನೇ
ಪ್ರೇರಿಸುವಕಾರಣದಿ ಹರಿಗೆ ಕು
ಬೇರನೆಂಬರು ಎಲ್ಲರೊಳು ನಿರ್ಗತಗತಿಗೆ ನಿರುತ
ಸೂರಿಗಮ್ಯಗೆ ಸೂರ್ಯನೆಂಬರು
ದೂರ ಶೋಕಗೆ ಶುಷ್ಕಲಿಂಗ ಶ
ರೀರವಿಲ್ಲದ ಕಾರಣದಲಿ ಅಕಾಯನೆನಿಸುವನು ೩೮

ಪೇಳಲೊಶವಲ್ಲವು ಮಹಾಪಾ
ಪಾಳಿಗಳ ನೊಂದೇಕ್ಷಣದಿ ನಿ
ಪೂರ್ಣಲಗ್ಯೈಸಲಿಬೇಕು ಎಂಬುವಗೊಂದೆ ಹರಿನಾಮ
ನಾಲಿಗೆಯೊಳುಳ್ಳವಗೆ ಪರಮ ಕೃ
ಪಾಳು ಕೃಷ್ಣನು ಕೈಪಿಡಿದು ತ
ನ್ನಾಲಯದೊಳಿಟ್ಟನುದಿನದಲಾನಂದ ಬಡಿಸುವನು ೩೯

ರೋಗಿಯೌಷಧ ಪಥ್ಯದಿಂದ ನಿ
ರೋಗಿಯೆನಿಸುವ ತೆರದಿ ಶ್ರೀಮ
ದ್ಭಾಗವತ ಸುಶ್ರವಣಗೈದು ಭವಾಖ್ಯ ರೋಗವನು
ನೀಗಿ ಶಬ್ದಾದ್ಯಖಿಳ ವಿಷಯನಿ
ಯೋಗಿ ಸುದಶೇಂದ್ರಿಯವನಿಲನೊಳು
ಶ್ರೀಗುರು ಜಗನ್ನಾಥ ವಿಠ್ಠಲ ಪ್ರೀತನಾಗುವನು ೪೦

ಅಂತು ಸಂಧಿ ೨೪ ಕ್ಕೆ ಪದ ೮೧೨ ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು

---

## ಸಂಧಿ ೩೧ 'ಆರೋಹಣ ಅನುಕ್ರಮಣಿಕ ತಾರತಮ್ಯ ಸಂಧಿ'

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಭಕ್ತರೆನಿಸುವ ದಿವ್ಯಪುರುಷರ
ಉಕ್ತಿಲಾಲಿಸಿ ಪೇಳ್ವ ಮುಕ್ತಾ
ಮುಕ್ತ ಜೀವರ ತಾರತಮ್ಯವ ಮುನಿಪ ಶಾಂಡಿಲ್ಯ (ಸಂಧಿಸೂಚನೆ)

ಸ್ಥಾವರರ ನೋಡಲ್ಕೆ ತೃಣಕ್ರಿಮಿ
ಜೀವರುತ್ತಮ ಕ್ರಿಮಿಗಳಿಂದಲ
ಭಾವಿಗೋಗಜ ವ್ಯಾಘ್ರಸಿಂಹಗಳಿಂದ ಶೂದ್ರಾದಿ
ಮೂವರುತ್ತಮ ಕರ್ಮಕರ ಭೂ
ದೇವರುತ್ತಮ ಕರ್ಮಿ ನೋಡಲು
ಕೋವಿದೋತ್ತಮ ಕವಿಗಳಿಂದಲಿ ಕ್ಷಿತಿಪರುತ್ತಮರು ೧

ಧರಣಿಪರ ನೋಡಲ್ಕೆ ನರ ಗಂ
ಧರುವರುತ್ತಮ ದೇವಗಂಧ
ರ್ವರ ಗಣೋತ್ತಮ ಇವರಿಗಿಂತ ಶತೋನ ಶತಕೋಟಿ
ಪರಮ ಋಷಿಗಳು ಉತ್ತಮರು ಸ್ತ್ರೀ
ಯರು ಸಮಾನರು ಇವರಿಗೀತಲಿ
ಚಿರಪಿತೃಗಳುತ್ತಮರು ಚಿರನಾಮಕ ಪಿತೃಗಳಿಂದ ೨

ಎರಡಯಿದು ಎಂಭತ್ತು ಋಷಿ ತುಂ
ಬುರು ಶತೋರ್ವಸಿ ಯಪ್ಸರಸ್ತ್ರೀ
ಯರು ಶತಾಜಾನಜರು ಉತ್ತಮ ಚಿರಪಿತೃಗಳಿಂದ
ವರರು ಊರ್ವಸಿಗಿಂತ ವೈಶ್ವಾ
ನರನ ಸುತರೀರೆಂಟುಸಾವಿರ
ಹರದೆಯರೊಳುತ್ತಮಕಶೇರೆಪ್ಪತ್ತುನಾಲ್ಕುಜನ ೩

ಸರಿಯೆನಿಪರು ವ್ರಜೌಕ ಸ್ತ್ರೀಯರು
ವರಸುರಾಸ್ಯಾತ್ಮಜೆಯರಿಗೆ ಪು
ಷ್ಕರನು ಕರ್ಮಪ ಪುಷ್ಕರನಿಗೆ ಶನೈಶ್ಚರೋತ್ತಮನು
ತರಣಿಜನಿಗುತ್ತಮಳುಷಾಶ್ವಿನಿ
ಸುರರರಸಿಗುತ್ತಮ ಜಲಪ ಬುಧ
ಶರಧಿಜಾತ್ಮಜಗುತ್ತಮ ಸ್ವಹಾದೇವಿಯೆನಿಸುವಳು ೪

ಅನಳ ಭಾರ್ಯಗಳಿಗಿಂತನಾಖ್ಯಾ
ತನಿಮಿಷರನಾಖ್ಯಾತರಿಂದಲಿ
ಧನಪ ಪರ್ಜನ್ಯಾನಿರುದ್ಧನ ಸ್ತ್ರೀಯುಷಾದೇವಿ
ದ್ಯುನದಿ ಸಂಜ್ಞಾ ಶ್ಯಾಮಲಾ ರೋ
ಹಿಣಿಗಳೈವರು ಸಮರನಾಖ್ಯಾ
ತನಿಮಿಷೋತ್ತಮರಿವರಿಗಿಂತಲಿ ನೂರು ಕರ್ಮಜರು ೫

ಪೃಥುನಹುಷ ಶಶಿಬಿಂದು ಪ್ರಿಯ
ವ್ರತ ಪರೀಕ್ಷಿತ ನೃಪರು ಭಾಗೀ
ರಥಿಯ ನೋಡಲ್ಕಧಿಕ ಬಲ್ಯಾದಿಂದ್ರಸಪ್ತಕರು
ಪಿತೃಗಳೆಂಟೆಂಟಧಿಕ ವಪ್ಸರೆ
ಸತಿಯರೀರೈದೊಂದು ಮನುಗಳು
ದಿತಿಜ ಗುರುಚ್ಯಾವನ ಉಚಥ್ಯರು ಕರ್ಮಜರು ಸಮರು ೬

ಧನಪ ವಿಷ್ವಕ್ಸೇನ ಗಣಪಾ
ಶ್ವಿನಿಗಳೆಂಭತ್ತೈದು ಶೇಷರಿ
ಗೆಣೆಯೆನಿಸುವರು ಮಿತ್ರ ತಾರಾ ನಿಋುತಿಪ್ರವಹೆ
ಗುಣಗಳಿಂದೈದಧಿಕ ಎಂಭ
ತ್ತೈನಿಪ ಶೇಷರಿಗುತ್ತಮರು ಸ
ನ್ಮುನಿ ಮರೀಚಿ ಪುಲಸ್ತ್ಯ ಪುಲಹಕ್ರತುವಸಿಷ್ಠಮುಖಿ ೭

ಅತ್ರಿಯಂಗಿರರೇಳು ಬ್ರಹ್ಮನ
ಪುತ್ರರವರಿಗೆ ಸಮರು ವಿಶ್ವಾ
ಮಿತ್ರ ವೈವಸ್ವತರು ಈಶಾವೇಶ ಬಲದಿಂದ
ಮಿತ್ರಗಿಂತುತ್ತಮರು ಸ್ವಾಹಾ
ಭರ್ತೃ ಭೃಗುವು ಪ್ರಸೂತಿ ವಿಶ್ವಾ
ಮಿತ್ರ ಮೊದಲಿಂಪವರಿಗಿಂತಲಿ ಮೂಪರುತ್ತಮರು ೮

ನಾರದೋತ್ತಮನಗ್ನಿಯಿಂಪಲಿ
ವಾರಿನಿಧಿ ಪಾದೋತ್ತಮನು ಯಮ
ತಾರಕೇಶ ದಿವಾಕರನು ಶತರೂಪರುತ್ತಮರು
ವಾರಿಜಾಪ್ತನಿಗಿಂತ ಪ್ರವಹಾ
ಮಾರುತೋತ್ತಮ ಪ್ರವಹಗಿಂತಲಿ
ಮಾರಪುತ್ರನಿರುದ್ಧ ಗುರು ಮನು ದಕ್ಷಶಚಿರತಿಯು ೯

ಆರುಜನಗಳಿಗಿಂತಲಾಹಂ
ಕಾರಿಕ ಪ್ರಾಣೋತ್ತಮಖಿಳ ಶ
ರೀರಮಾನಿ ಪ್ರಾಣಗಿಂತಲಿ ಕಾಮಇಂದ್ರರಿಗೆ
ಗೌರಿ ವಾರುಣಿ ಖಗ ಪರಾಣಿಗೆ
ಶೌರಿ ಮಹಿಷಿಯರೊಳಗೆ ಜಾಂಬುವ
ತೀರ ಮಾಯುತಳಾದಕಾರಣ ಅಧಿಕಳೆನಿಸುವಳು ೧೦

ಹರಫಣಿಪವಿಹಗೇಂದ್ರ ಮೂವರು
ಹರಿಮಡದಿಯರಿಗುತ್ತಮರು ಸೌ
ಪರಣಿಪತಿಗುತ್ತಮರು ಭಾರತಿ ವಾಣಿಯಿರ್ವರಿಗೆ
ಮರುತ ಬ್ರಹ್ಮರು ಉತ್ತಮರು ಇಂ
ದಿರೆಯು ಪರಮೋತ್ತಮಳು ಲಕ್ಷ್ಮಿಗೆ
ಸರಿಯೆನಿಸುವವರಿಲ್ಲವೆಂದಿಗು ದೇಶಕಾಲದೊಳು ೧೧

ಶ್ರೀಮುಕುಂದನ ಮಹಿಳೆ ಲಕುಮಿ ಮ
ಹಾಮಹಿಮೆಗೇನೆಂಬೆ ಬ್ರಹ್ಮೇ
ಶಾಮರೇಂದ್ರರ ಸೃಷ್ಟಿಸ್ಥಿತಿಲಯಗೈಸಿಯವರವರ
ಧಾಮಗಳ ಕಲ್ಪಿಸಿಕೊಡುವಳಜ
ರಾಮರಣಳಾಗಿದ್ದು ಸರ್ವ
ಸ್ವಾಮಿ ಮಮಗುರುವೆಂದುಪಾಸನೆ ಮಾಳ್ಪಳಚ್ಯುತನ ೧೨

ಈಸುಮಹಿಮೆಗಳುಳ್ಳ ಲಕುಮಿ ಪ
ರೇಶನಂತಾಂಶಾಂಶಗುಣದೊಳು
ಲೇಶಲೇಶಕೆ ಸರಿಯೆನಿಸಳಾವಾವ ಕಾಲದಲಿ
ದೇಶಕಾಲಾತೀತ ಲಕುಮಿಗೆ
ಕೇಶವನ ವಕ್ಷಸ್ಥಳವೆ ಅವ
ಕಾಶವಾಯಿತು ಇವನ ಮಹಿಮಾವ್ಯಾಪ್ತಿಗೆಣೆಯುಂಟೆ ೧೩

ಒಂದು ರೂಪದೊಳೊಂದವಯವದೊ
ಳೊಂದು ರೋಮದೊಳೊಂದು ದೇಶದಿ
ಪೊಂದಿಕೊಂಡಿಹರಜಭವಾದಿ ಸಮಸ್ತ ಜೀವಗಣ
ಸಿಂಧುಸಪ್ತ ದ್ವೀಪಮೇರುಸು
ಮಂದರಾದ್ಯದ್ರಿಗಳು ಬ್ರಹ್ಮಪು
ರಂದರಾದಿ ಸಮಸ್ತ ಲೋಕಪರಾಲಯಗಳೆಲ್ಲ ೧೪

ಸರ್ವ ದೇವೋತ್ತಮನು ಸರ್ವಗ
ಸರ್ವಗುಣ ಸಂಪೂರ್ಣ ಸರ್ವದ
ಸರ್ವತಂತ್ರ ಸ್ವತಂತ್ರ ಸರ್ವಾಧಾನ ಸರ್ವಾತ್ಮ
ಸರ್ವತೋಮುಖ ಸರ್ವನಾಮಕ
ಸರ್ವಜನ ಸಂಪೂಜ್ಯ ಶಾಶ್ವತ
ಸರ್ವ ಕಾಮ್ಯದ ಸರ್ವಸಾಕ್ಷಿಗ ಸರ್ವ ಜಿತ್ಸರ್ವ ೧೪

ತಾರತಮ್ಯಾರೋಹಣವ ಬರೆ
ದಾರುಪರಿಸುವರವರಲಕ್ಷ್ಮೀ
ನಾರಸಿಂಹ ಸಮಸ್ತ ದೇವಗಣಾಂತರಾತ್ಮಕನು
ಪೂರಯಿಸುವ ಮನೋರಥಂಗಳ
ಕಾರುಣಿಕ ಕೈವಲ್ಯದಾಯಕ
ದೂರಗೈವ ಸಮಸ್ತ ದುರಿತವ ವಿಗತಭಯಶೋಕ ೧೫

ಪ್ರಣತಕಾಮದ ನಂಘ್ರಿಸಂದರು
ಶನವಪೇಕ್ಷೆಗಳುಳ್ಳವಗೆ ನಿ
ಚ್ಚಣಿಕೆಯೆನಿಪುದು ಜಡಮೊದಲು ಬ್ರಹ್ಮಾಂತ ತರತಮವು
ಮನವಚನದಿಂ ಸ್ಮರಿಸುವರ ಭವ
ವನಧಿ ಶೋಷಿಸಿ ಪೋಗುವುದು ಕಾ
ರಣವೆನಿಸುವುದು ಜ್ಞಾನಭಕ್ತಿ ವಿರಕ್ತಿಸಂಪದಕೆ ೧೬

ಅನಲನೊಳು ಹೋಮಿಸುವ ಹರಿಚಂ
ದನವೆ ಮೊದಲಾದುದರ ಸೂವಾ
ಸನೆಯು ಪ್ರತ್ಪ್ರತ್ಯೇಕ ತೋರ್ಪುದು ಎಲ್ಲಕಾಲದಲಿ
ದನುಜಮಾನವ ದಿವಿಜರವರವ
ರನುಚಿತೋಚಿತ ಕರ್ಮವೃಜಿನಾ
ರ್ದನನುವ್ಯಕ್ತಿಯಮಾಳ್ಪ ತ್ರಿಗುಣಾತೀತ ವಿಖ್ಯಾತ ೧೭

ಭಕ್ತವತ್ಸಲ ಭಾಗ್ಯಪುರುಷ ವಿ
ವಿಕ್ತ ವಿಶ್ವಾಧಾರ ಸರ್ವೋ
ದ್ರಿಕ್ತ ದೋಷವಿದೂರ ದುರ್ಗಮ ದುರ್ವಿಭಾವ್ಯ ಸ್ವಭು
ಶಕ್ತ ಶಾಶ್ವತ ಸಕಲವೇದೈ
ಕೋಕ್ತ ಮಾನದ ಮಾನ್ಯಮಾಧವ
ಸೂಕ್ತ ಸೂಕ್ಷ್ಮ ಸ್ಥೂಲ ತ್ರಿಜಗನ್ನಾಥವಿಠ್ಠಲನು ೧೯

ಅಂತು ಸಂಧಿ ೨೫ ಕ್ಕೆ ಪದ್ಯಗಳು ೮೩೧ ಕ್ಕೆ ಮಂಗಳಂ.

ಶ್ರೀಕೃಷ್ಣಾರ್ಪಣಮಸ್ತು



## ಸಂಧಿ ೨೬ 'ಅವರೋಹಣ ಅನುಕ್ರಮಣಿಕ ತಾರತಮ್ಯಸಂಧಿ'

ಹರಿಃ ಓಂ.

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಶ್ರೀರಮಣ ನಿಜಭಕ್ತರೆನಿಸುವ
ವಾರಿಜಾಸನ ಮುಖ್ಯ ನಿರ್ಜರ
ತಾರತಮ್ಯವಪೇಳ್ವೆ ಸಂತೋಷದಲಿ ಗುರುಬಲದಿ (ಸಂಧಿ ಸೂ)

ಕೇಶವಗೆ ನಾರಾಯಣಿಗೆ ಕಮ
ಲಾಸನ ಸಮೀರಣಗೆ ವಾಣೀ
ವೀಶಫಣಿಪ ಮಹೇಶರಿಗೆ ಷಣ್ಮಹಿಳೆಯರ ಪದಕೆ
ಶೇಷರುದ್ರರ ಪತ್ನಿರವರಿಗೆ
ವಾಸವ ಪ್ರದ್ಯುಮ್ನರಿಗೆ ಸಂ
ತೋಷದಲಿ ವಂದಿಸುವೆ ಭಕ್ತಿಜ್ಞಾನ ಕೊಡಲೆಂದು ೧

ಪ್ರಾಣದೇವಗೆ ನಮಿಪೆ ಕಾಮನ
ಸೂನು ಮನು ಗುರು ದಕ್ಷ ಶಚಿ ರತಿ
ಮಾನಿನಿಯರಿಗೆ ಪ್ರವಹದೇವಗೆ ಸೂರ್ಯಸೋಮಯಮ
ಮಾನವಿಗೆ ವರುಣನಿಗೆ ವೀಣಾ
ಪಾಣಿ ನಾರದಮುನಿಗೆ ನಮಿಸುವೆ
ಜ್ಞಾನ ಭಕ್ತಿ ವಿರಕ್ತಿಮಾರ್ಗವ ತಿಳಿಸಲೆಮಗೆಂದು ೨

ಅನಳ ಭೃಗುದಾಕ್ಷಾಯಣಿಯರಿಗೆ
ಕನಕ ಗರ್ಭಜ ಸಪ್ತಋಷಿಗಳಿ
ಗೆಣೆಯೆನಿಪ ವೈವಸ್ವತಮನುಗೆ ಗಾಧಿ ಸಂಭವಗೆ
ದನುಜನಿರುರುತಿ ತಾರೆ ಪ್ರಾವಹಿ
ವನಜ ಮಿತ್ರರಿನಶ್ವಿನಿರ್ಗಣ
ಧನಪ ವಿಷ್ವಕ್ಸೇನರಿಗೆ ವಂದಿಸುವೆ ನನವರತ ೩

ಉಕ್ತ ದೇವರ್ಕಳನುಳಿದು ಎಂ
ಭತ್ತು ಐದು ಜನಗಳು ಮನಗಳು
ಚಿಧ್ಯ ಚ್ಯಾವನ ಯಮುಳರಿಗೆ ಕರ್ಮಜರೆನಿಸುತಿಪ್ಪ
ಕಾರ್ತವೀರ್ಯಾರ್ಜುನ ಪ್ರಮುಖ ಶ
ತಸ್ವರಿಗೆ ಪರ್ಜನ್ಯ ಗಂಗಾ
ದಿತ್ಯ ಯಮಸೋಮಾನಿರುದ್ಧರ ಪತ್ನಿಯರ ಪದಕೆ ೪

ಹುತವಹಾರ್ಧಾಂಗಿನಿಗೆ ಚಂದ್ರನ
ಸುತ ಬುಧಗೆ ನಾಮಾತ್ಮಿ ಕೋಷಾ
ಸತಿಗೆ ಛಾಯಾತ್ಮಜ ಶನೈಶ್ಚರಗಾನಮಿಪೆ ಸತತ
ಪ್ರತಿ ದಿವಸದಲಿ ಬಿಡದೆ ಜೀವ
ಪ್ರತತಿಮಾಡುವ ಕರ್ಮಗಳಿಗಧಿ
ಪತಿಯೆನಿಪ ಪುಷ್ಕರನ ಪಾದಾಂಬುಜಗಳಿಗೆ ನಮಿಪೆ ೫

ಆನಮಿಪೆನಾ ಜಾನಜನಕೆ ಕೃ
ಶಾನು ಸುತರಿಗೆ ಗೋವ್ರಜದೊಳಿಹ
ಮಾನಿನಿಯರಿಗೆ ಚಿರಪಿತರು ಶತನ್ಯೂನ ಶತಕೋಟಿ
ಮೌನಿಜನರಿಗೆ ದೇವಮಾನವ
ಗಾನ ಪ್ರೌಢರಿಗವನಿಪರಿಗೆ ರ
ಮಾನಿವಾಸನ ದಾಸವರ್ಗಕೆ ನಮಿಪೆ ನನವರತ ೬

ಅನುಕ್ರಮಣಿಕಾ ತಾರತಮ್ಯವ
ನನುದಿನದಿ ಸದ್ಭಕ್ತಿ ಪೂರ್ವಕ
ನೆನೆವರಿಗೆ ಧರ್ಮಾರ್ಥ ಕಾಮಾದಿಗಳು ಫಲಿಸುವುವು
ವನಜಸಂಭವ ಮುಖ್ಯರವಯವ
ರೆನಿಸುವರು ಜಗನ್ನಾಥ ವಿಠಲಗೆ
ವಿನಯದಿಂದಲಿ ನಮಿಸಿ ಕೊಂಡಾಡುವುದು ಮರೆಯದಲೆ ೭

ಅಂತು ಸಂಧಿ ೩೨ಕ್ಕೆ ಪದ್ಯಗಳು ೮೩೮ಕ್ಕೆ ಮಂಗಳಂ.

ಶ್ರೀ ಕೃಷ್ಣಾರ್ಪಣಮಸ್ತು



## ಸಂಧಿ ೩೨ "ಅನುಕ್ರಮಣಿಕಾಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದ ನಾದರದಿ ಕೇಳುವುದು ಪ

ಮಾನುಷೋತ್ತಮರ್ಹಿಡಿದು ಸಂಕರು
ಷಾಣ ಪರಿಯಂತರದಿ ಪೇಳಿರು
ವಾನುಕ್ರಮಣಿಕ ಪದ್ಯವನು ಕೇಳುವುದು ಸಜ್ಜನರು (ಸ ಸೂ)

ಶ್ರೀಮದಾಚಾರ್ಯರ ಮತಾನುಗ
ದೀಮತಾಂವರರಂಘ್ರಿಕಮಲಕೆ
ಸೋಮಪಾನಾರ್ಹರಿಗೆ ತಾತ್ವಿಕ ದೇವತಾಗಣಕೆ
ಹೈಮವತಿ ಷಣ್ಮಹಿಷಿಯರಡಿಗೆ
ವ್ಯೋಮಕೇಶಗೆ ವಾಣಿವಾಯುಸು
ತಾಮರಸಜವ ಲಕುಮಿನಾರಾಯಣರಿಗಾನಮಿವೆ ೧

ಶ್ರೀಮತಾಂವರ ಶ್ರೀಪತೇಸ
ತ್ಕಾಮಿತಪ್ರದ ಸೌಮ್ಯತ್ರಿಕ ಕು
ದ್ಧಾಮ ತ್ರಿಚತುಷ್ಪಾದ ಪಾವನಚರಿತ ಚಾವಾರ್ಂಗ
ಗೋಮತಿಪ್ರಿಯ ಗೌಣ ಗುರುತಮ
ಸಾಮಗಾಯನಲೋಲ ಸರ್ವ
ಸ್ವಾಮಿ ಮಮಕುಲದೈವ ಸಂತೈಸುವುದು ಸಜ್ಜನರ

ರಾಮರಾಕ್ಷಸಕುಲ ಭಯಂಕರ
ಸಾಮಜೇಂದ್ರಪ್ರಿಯ ಮನೋವಾ
ಚಾಮಗೋಚರ ಚಿತ್ಸುಖಪ್ರದ ಚಾರುತರ ಚರಿತ
ಭಾಮ ಭೂಸ್ವರ್ಗಾಪವರ್ಗದ
ಕಾಮಧೇನು ಸುಕಲ್ಪತರು ಚಿಂ
ತಾಮಣಿಯು ಎಂದೆನಿಪ ನಿಜಭಕ್ತರಿಗೆ ಸರ್ವತ್ರ ೩

ಸ್ವರ್ಣವರ್ಣ ಸ್ವತಂತ್ರ ಸರ್ವಗ
ಕರ್ಣಹೀನ ಸುಶಯ್ಯ ಶಾಶ್ವತ
ವರ್ಣ ಚತುರಾಶ್ರಮ ವಿವರ್ಜಿತ ಚಾರುತರ ಸ್ವರತ
ಅರ್ಣ ಸಂಪ್ರತಿಪಾದ್ಯ ವಾಯುಸು
ಪರ್ಣ ವರವಹನಪ್ರತಿಮ ವಟ
ಪರ್ಣಶಯನಾಶ್ಚರ್ಯ ತವು ಸಚ್ಚರಿತ ಗುಣಭರಿತ ೬

ಅಗಣಿತ ಸುಗುಣಧಾಮ ನಿಶ್ಚಲ
ಸ್ವಗತ ಭೇದ ವಿಶೂನ್ಯಶಾಶ್ವತ
ಜಗದ ಜೀವಾತ್ಯಂತ ಭಿನ್ನಾಪನ್ನ ಪರಿಪಾಲ
ತ್ರಿಗುಣವರ್ಜಿತ ತ್ರಿಭುವನೇಶ್ವರ
ಹಗಲಿರುಳು ಸ್ಮರಿಸುತಲಿಹರ ಬಿ
ಟ್ಟಗಲ ಶ್ರೀಜಗನ್ನಾಥವಿಠ್ಠಲ ವಿಶ್ವವ್ಯಾಪಕನು ೫

ಅಂತು ೨೭ಕ್ಕೆ ಪದ್ಯಗಳು ೮೮೩ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು



## ಸಂಧಿ — ೨೮ 'ವಿಘ್ನೇಶ್ವರಸ್ತೋತ್ರ ಸಂಧಿ'

ಹಂ: ೬೦

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿಂದನಾದರದಿ ಕೇಳುವುದು ಪ

ಶ್ರೀಶನಂಘ್ರಿ ಸರೋಜಭೃಂಗ ಮ
ಹೇಶಸಂಭವ ಮನ್ಮನದೊಳು ಪ್ರ
ಕಾಶಿಸನುದಿನ ಪ್ರಾರ್ಥಿಸುವೆ ಪ್ರೇಮಾತಿಶಯದಿಂದ
ನೀ ಸಲಹು ಸಜ್ಜನರ ವೇದ
ವ್ಯಾಸ ಕರುಣಾಪಾತ್ರ ಮಹದಾ
ಕಾಶಪತಿ ಕರುಣಾಳು ಕೈಪಿಡಿದೆಮ್ಮನುದ್ಧರಿಸು ೧

ಏಕದಂತ ಇಭೇಂದ್ರಮುಖ ಚಾ
ಮೀಕರ ಕೃತ ಭೂಷಣಾಂಗ ಕೃ
ಪಾಕಟಾಕ್ಷದಿ ನೋಡು ವಿಜ್ಞಾಪಿಸುವೆನಿನಿತೆಂದು
ನೋಕನೀಯನ ತುತಿಸುತಿಪ್ಪ ವಿ
ವೇಕಿಗಳ ಸಹವಾಸ ಸುಖಗಳ
ನೀ ಕರುಣಿಸುವುದೆಮಗೆ ಸಂತತ ಪರಮ ಕರುಣದಲಿ ೨

ವಿಘ್ನರಾಜನೆ ದುರ್ವಿಷಯದೊಳು
ಮಗ್ನವಾಗಿಹ ಮನವ ಮಹದೋ
ಷಘ್ನನಂಘ್ರಿಸರೋಜಯುಗಳದಿ ಭಕ್ತಿಪೂರ್ವಕದಿ
ಲಗ್ನವಾಗಲಿ ನಿತ್ಯನರಕ ಭ
ಯಾಗ್ನಿಗಳಿಗಾನಂಜೆ ಗುರುವರ
ಭಗ್ನಗೈಸೆನ್ನವಗುಣಗಳನು ಪ್ರತಿದಿವಸದಲ್ಲ ೩

ಧನಪ ವಿಷ್ವಕ್ಸೇನ ವೈದ್ಯಾ
ಶ್ವಿನಿಗಳಿಗೆ ಸರಿಯೆನಿಪ ಷಣ್ಮುಖ
ನನುಜ ಶೇಷಶತಸ್ಥ ದೇವೋತ್ತಮವಿಯದ್ಗಂಗಾ
ವಿನುತ ವಿಶ್ವೋಪಾಸಕನೆ ಸ
ಸ್ಮನದಿ ವಿಜ್ಞಾಪಿಸುವೆ ಲಕುಮೀ
ವನಿತೆಯರಸನ ಭಕ್ತಿಜ್ಞಾನವಕೊಟ್ಟು ಸಲಹುವುದು ೪

ಚಾರುದೇಷ್ಣಾಹ್ವಯನೆನಿಸಿ ಅವ
ತಾರ ಮಾಡಿದೆ ರುಗ್ಮಿಣೀಯಲಿ
ಗೌರಿಯರಸನವರದಿ ಉದ್ಧಟರಾದ ರಾಕ್ಷಸರ
ಶೌರಿಯಾಜ್ಞದಿ ಸಂಹರಿಸಿ ಭೂ
ಭಾರವಿಳುಹಿದ ಕರುಣಿತ್ವತ್ಪಾ
ದಾರವಿಂದಕೆ ನಮಿಪೆ ಕರುಣಿಪುದೆಮಗೆ ಸನ್ಮತಿಯ ೫

ಶೂರ್ಪಕರ್ಣದ್ವಯವಿರಾಜಿತ
ದರ್ಪಶರ ಉದಿತಾರ್ಕ ಸನ್ನಿಭ
ಸರ್ಪವರಕಟಿಸೂತ್ರ ವೈಕೃತಗಾತ್ರ ಸುಚರಿತ್ರ
ಸ್ವರ್ಪಿತಾಂಕುಶ ಪಾಶಕರ ಖಳ
ದರ್ಪಭಂಜನ ಕರ್ಮಸಾಕ್ಷಿಗ
ತರ್ಪಕನು ನೀನಾಗಿ ತೃಪ್ತಿಯ ಪಡಿಸು ಸಜ್ಜನರ ೬

ಖೇಶಪರಮ ಸುಭಕ್ತಿ ಪೂರ್ವಕ
ವ್ಯಾಸಕೃತ ಗ್ರಂಥಗಳನರಿತು ಪ್ರ
ಯಾಸವಿಲ್ಲದೆ ಬರೆದು ವಿಸ್ತರಿಸಿದೆಯೊ ಲೋಕದೊಳು
ಪಾಶಪಾಣಿಯೆ ಪ್ರಾರ್ಥಿಸುವೆನುಪ
ದೇಶಿಸೆನಗದರರ್ಥಗಳ ಕರು
ಣಾಸಮುದ್ರ ಕೃಪಾಕಟಾಕ್ಷದಿ ನೋಡು ಪ್ರತಿದಿನದಿ ೭

ಶ್ರೀಶನತಿ ನಿರ್ಮಲ ಸುನಾಭೀ
ದೇಶವಸ್ಥಿತ ರಕ್ತಶೃಂಗಗ
ದಾ ಸುಶೋಭಿತಗಾತ್ರ ಲೋಕಪವಿತ್ರ ಸುರಮಿತ್ರ
ಮೂಷಕಾಸುರವಹನ ಪ್ರಾಣಾ
ವೇಶಯುತ ಪ್ರಖ್ಯಾತಪ್ರಭು ಪೂ
ರೈಸು ಭಕ್ತರು ಬೇಡಿದಿಷ್ಟಾರ್ಥಗಳ ಪ್ರತಿದಿನದಿ ೮

ಶಂಕರಾತ್ಮಜ ದೈತ್ಯರಿಗತಿಭ
ಯಂಕರಗಳನು ಈಯಲೋಸುಗ
ಸಂಕಟ ಚತುರ್ಥಿಗನೆನಿಸಿ ಅಹಿತಾರ್ಥಗಳ ಕೊಟ್ಟು
ಮಂಕುಗಳ ಮೋಹಿಸುವ ಚಕ್ರಗ
ದಾಂಕಿತನೆ ದಿನದಿನದಿ ತ್ವತ್ಪದ
ಪಂಕಜಗಳಿಗೆ ಬಿನ್ನಯಿಸುವೆನು ಪಾಲಿಪುದು ಎಮ್ಮ ೯

ಸಿದ್ಧ ವಿದ್ಯಾಧರಗಣ ಸಮಾ
ರಾಧ್ಯ ಚರಣಸರೋಜಸರ್ವ ಸು
ಸಿದ್ಧಿದಾಯಕ ಶೀಘ್ರದಿಂ ಪಾಲಿಪುದು ಬಿನ್ನಪವ
ಬುದ್ಧಿ ವಿದ್ಯಾಜ್ಞಾನಬಲ ಪರಿ
ಶುದ್ಧ ಭಕ್ತಿ ವಿರಕ್ತಿನಿರುತನ
ವದ್ಯನಸ್ಮೃತಿ ಲೀಲೆಗಳ ಸುಸ್ತವನವದನದಲಿ ೧೦

ರಕ್ತವಾಸದ್ವಯ ವಿಭೂಷಣ
ಉಕ್ತಿಲಾಲಿಸು ಪರಮಭಗವ
ದ್ಭಕ್ತವರ ಭವ್ಯಾತ್ಮ ಭಾಗವತಾದಿ ಶಾಸ್ತ್ರದಲಿ
ಸಕ್ತವಾಗಲಿ ಮನವು ವಿಷಯ ವಿ
ರಕ್ತಿ ಪಾಲಿಸು ವಿದ್ವದಾದ್ಯ ವಿ
ಮುಕ್ತನೆಂದೆನಿಸೆನ್ನ ಭವಭಯದಿಂದಲನುದಿನದಿ ೧೧

ಶುಕ್ರಶಿಷ್ಯರ ಸಂಹರಿಪುದಕೆ
ಶಕ್ರನಿನ್ನನು ಪೂಜಿಸಿದನು ಉ
ರುಕ್ರಮ ಶ್ರೀರಾಮಚಂದ್ರನು ಸೇತು ಮುಖದಲ್ಲಿ
ಚಕ್ರವರ್ತಿಪ ಧರ್ಮರಾಜನು
ಚಕ್ರಪಾಣಿಯ ನುಡಿಗೆ ಭಜಿಸಿದ
ವಕ್ರತುಂಡನೆ ನಿನ್ನೊಳೆಂತುಂಟೀಶನುಗ್ರಹವು ೧೨

ಕೌರವೇಂದ್ರನು ನಿನ್ನ ಭಜಿಸದ
ಕಾರಣದಿ ನಿಜಕುಲಸಹಿತ ಸಂ
ಹಾರವೈದಿದ ಗುರು ವೃಕೋದರನವನಗದೆಯಿಂದ
ತಾರಕಾಂತಕನನುಜ ಎನ್ನ ಶ
ರೀರದೊಳು ನೀನಿಂತು ಧರ್ಮ
ಪ್ರೇರಕನು ನೀನಾಗಿ ಸಂತೈಸೆನ್ನ ಕರುಣದಲಿ ೧೩

ಏಕವಿಂಶತಿ ಮೋದಕಪ್ರಿಯ
ಮೂಕರನು ವಾಗ್ಮಿಗಳ ಮಾಳ್ಪೆ ಕೃ
ಪಾಕರೇಶ ಕೃತಜ್ಞ ಕಾಮದ ಕಾಯೋ ಕೈಪಿಡಿದು
ಲೇಖಕಾಗ್ರಣಿ ಮನ್ಮನದ ದು
ರ್ವ್ಯಾಕುಲವ ಪರಿಹರಿಸು ದಯದಿ ಪಿ
ನಾಕಿಭಾರ್ಯಾತನುಜ ಮೃದ್ಭವ ಪ್ರಾರ್ಥಿಸುವೆ ನಿನಗೆ ೧೪

ನಿತ್ಯಮಂಗಳ ಚರಿತ ಜಗದು
ತ್ಪತ್ತಿ ಸ್ಥಿತಿಲಯ ನಿಯಮನಜ್ಞಾ
ನತ್ರಯಪ್ರದ ಬಂಧಮೋಚಕ ಸುಮನಸಾಸುರರ
ಚಿತ್ತವೃತ್ತಿಗಳಂತೆ ನಡೆವ ಪ್ರ
ಮತ್ತನಲ್ಲ ಸಹೃಜ್ಜನಾಪ್ತನೆ
ನಿತ್ಯದಲಿ ನೆನೆನೆನೆದು ಸುಖಿಸುವ ಭಾಗ್ಯ ಕರುಣಿಪುದು ೧೫

ಪಂಚಭೇದ ಜ್ಞಾನವರುಪು ವಿ
ರಿಂಚ ಜನಕನ ತೋರುಮನದಲಿ
ವಾಂಛಿತಪ್ರದ ಒಲಿಮೆಯಿಂದಲಿ ದಾಸನೆಂದರಿದು
ಪಂಚವಕ್ತ್ರನ ತನಯ ಭವದೊಳು
ವಂಚಿಸದೆ ಸಂತೈಸು ವಿಷಯದಿ
ಸಂಚರಿಸದಂದದಲಿ ಮಾಡು ಮನಾದಿ ಕರಣಗಳ ೧೬

ಏನು ಬೇಡುವುದಿಲ್ಲ ನಿನ್ನ ಕು
ಯೋನಿಗಳು ಬರಲಂಜಿ ಲಕುಮಿ
ಪ್ರಾಣಪತಿ ತತ್ವೇಶರಿಂದೊಡಗೂಡಿ ಗುಣಕಾರ್ಯ
ತಾನೆ ಮಾಡುವನೆಂಬ ಈ ಸು
ಜ್ಞಾನವನೆ ಕರುಣಿಸುವುದೆಮಗೆ ಮ
ಹಾನುಭಾವ ಮುಹುರ್ಮುಹು ಪ್ರಾರ್ಥಿಸುವೆನಿನಿತೆಂದು ೧೭

ನಮೊನಮೋ ಗುರುವರ್ಯ ವಿಬುಧೋ
ತ್ತಮ ವಿವರ್ಜಿತನಿದ್ರ ಕಲ್ಪ
ದ್ರುಮನೆನಿಪೆ ಭಜಕರಿಗೆ ಬಹು ಗುಣಭರಿತ ಶುಭಚರಿತ
ಉಮೆಯನಂದನ ಪರಿಹರಿಸಹ
ಮ್ಮಮತೆ ಬುದ್ಧ್ಯಾದಿಂದ್ರಿಯಗಳಲಿ
ಕ್ರಮಿಸಿದಣಿಸುತಲಿಹವು ಭವದೊಳಗಾವಕಾಲದಲಿ ೧೮

ಜಯಜಯತು ವಿಘ್ನೇಶ ತಾಪ
ತ್ರಯ ವಿನಾಶನ ವಿಶ್ವಮಂಗಳ
ಜಯಜಯತು ವಿದ್ಯಾಪ್ರದಾಯಕ ವೀತ ಭಯಶೋಕ
ಜಯಜಯತು ಚಾರ್ವಾಂಗ ಕರುಣಾ
ನಯನದಿಂದಲಿ ನೋಡಿ ಜನುಮಾ
ಮಯ ಮೃತಿಗಳನು ಪರಿಹರಿಸು ಭಕ್ತರಿಗೆ ಭವದೊಳಗೆ ೧೯

ಕಡು ಕರುಣಿ ನೀನೆಂದರಿದು ಹೇ
ಒಡಲ ನಮಿಸುವೆ ನಿನ್ನಡಿಗೆ ಬೆಂ
ಬಿಡದೆ ಪಾಲಿಸು ಪರಮ ಕರುಣಾಸಿಂಧು ಎಂದೆಂದು
ನಡನಡುವೆ ಬರುತಿಪ್ಪ ವಿಘ್ನವ
ತಡೆದು ಭಗವನ್ನಾಮ ಕೀರ್ತನೆ
ನುಡಿದು ನುಡಿಸೆನ್ನಿಂದ ಪ್ರತಿದಿವಸದಲಿ ಮರೆಯದಲೆ ೨೦

ಏಕವಿಂಶತಿ ಪದಗಳೆನಿಸುವ
ಕೋಕನದ ವನಮಾಲಿಕೆಯ ವೈ
ನಾಕಿತನಯಾಂತರ್ಗತ ಶ್ರೀ ಪ್ರಾಣಪತಿಯೆನಿಪ
ಶ್ರೀಕರ ಜಗನ್ನಾಥವಿಠ್ಠಲ
ಸ್ವೀಕರಿಸಿ ಸ್ವರ್ಗಾಪವರ್ಗದಿ
ತಾ ಕೊಡುವ ಸೌಖ್ಯಗಳ ಭಕ್ತರಿಗಾವಕಾಲದಲಿ ೨೧

ಅಂತು ಸಂಧಿ ೨೮ಕ್ಕೆ ಪದ್ಯಗಳು ೮೬೪ಕ್ಕೆ ಮಂಗಳಂ.

ಶ್ರೀಕೃಷ್ಣಾರ್ಪಣಮಸ್ತು



## ಸಂಧಿ ೨೯ "ಅಣುತಾರತಮ್ಯ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿಂದ ನಾದರದಿ ಕೇಳುವುದು ಪ.

ವಿಷ್ಣು ಸರ್ವೋತ್ತಮನು ಪ್ರಕೃತಿ ಕ
ನಿಷ್ಠಳೆನಿಪಳನಂತಗುಣ ಪರ
ಮೇಷ್ಠಿಪವನರು ಕಡಮೆ ವಾಣೀ ಭಾರತಿಗಳಧಮ
ವಿಷ್ಣುವಾಹ ಫಣೀಂದ್ರ ಮೃಡರಿಗೆ
ಕೃಷ್ಣ ಮಹಿಷಿಯರಧಮರಿವರೊಳು
ಶ್ರೇಷ್ಠಳೆನಿಪಳು ಜಾಂಬವತಿಯಾವೇಶಬಲದಿಂದ ೧

ಪ್ಲವಗ ಪನ್ನಗ ಪಾಹಿ ಭೂಷಣ
ಯುವತಿಯರು ತಮತಮ್ಮೊಳಗೆ ಜಾಂ
ಬವತಿಗಿಂತಲಿ ಕಡಮೆ ಯಿವರಿಂದ್ರಿಂದ್ರಕಾಮರಿಗೆ
ಅವರ ಪ್ರಾಣನು ಕಡಮೆ ಪ್ರಾಣನ
ಕುವರ ಶಚಿರತಿ ದಕ್ಷ ಗುರು ಮನು
ಪ್ರವಹ ಮಾರುತ ಕೊರತೆ ಎನಿಸುವರಾರು ಜನರಿಂದ ೨

ಯಮದಿವಾಕರ ಚಂದ್ರಮಾನವಿ
ಸಮರು ಕೋಣಪ ಪ್ರವಹಗಧಮರು
ದ್ಯುಮಣಿಗಿಂತಲಿ ವರುಣ ನೀಚನು ನಾರದಾಧಮನು
ಸುಮನಸಾಸ್ಯ ಪ್ರಸೂತಿ ಭೃಗುಮುನಿ
ಸಮರು ನಾರದಗಧಮ ನತ್ರಿ
ಪ್ರಮುಖ ವಿಶ್ವಾಮಿತ್ರ ವೈವಸ್ವತರನಳಗಧಮ ೩

ಮಿತ್ರ ತಾರಾನಿರುತಿ ಪ್ರವಹನ
ಪತ್ನಿ ಪ್ರಾವಹಿ ಸಮರು ವಿಶ್ವಾ
ಮಿತ್ರಗಿಂತಲಿ ಕೊರತೆ ವಿಷ್ವಕ್ಸೇನಗಣನಾಥ
ವಿತ್ತಪತಿಯಶ್ವಿನಿಗಳಧಮರು
ಮಿತ್ರ ಮೊದಲಾದವರಿಗಿಂತಲಿ
ಬಿತ್ತರಿಪೆನು ಶತಸ್ಥ ದಿವಿಜರ ವ್ಯೂಹನಾಮಗಳ ೪

ಮರುತರೊಂಭತ್ತಧಿಕ ನಾಲ್ವ
ತ್ತೆರಡು ಅಶ್ವಿನಿ ವಿಶ್ವೆದೇವರು
ಎರಡಯಿದು ಹನ್ನೊಂದು ರುದ್ರರು ದ್ವಾದಶಾದಿತ್ಯ
ಗುರು ಪಿತೃತ್ರಯವಷ್ಟವಸುಗಳು
ಭರತ ಭಾರತಿಪೃಥ್ವಿ ಋಭುವೆ
ದರಿವುದಿವರನು ಸೋಮರಸ ಪಾನಾರ್ಹರಿವರೆಂದ ೫

ಈ ದಿವೌಕಸರೊಳಗೆ ಉಕ್ತರು
ಐದಧಿಕ ದಶವುಳಿದಯೆಂಭ
ತ್ತೈದು ಶೇಷರಿಗೆಣೆಯೆನಿಸುವರ್ಧನ ವಿನಾಯಕರು
ಸಾಧುವೈವಸ್ವತ ಸ್ವಯಂಭುವ
ಶ್ರೀದತಾಪಸರುಳಿದು ಮನು ಏ
ಕಾದಶರು ವಿಘ್ನೇಶಗಿಂತಲಿ ನೀಚರೆನಿಸುವರು ೬

ಚ್ಯವನನಂದನ ಕವಿ ಬೃಹಸ್ಪತಿ
ಯುವರಜನುಚಿಥ್ಯ ಮುನಿಪಾವಕ
ಧ್ರುವ ನಹುಷ ಶಶಿಬಿಂದು ಪ್ರಿಯವ್ರತನು ಪ್ರಹ್ಲಾದ
ಕುವಲಯ ಪುರುಕ್ತ್ಸೇತರಿಂದಲಿ
ಅವರ ರೋಹಿಣಿ ಶಾಮಲಾ ಜಾ
ಹ್ನವಿ ವಿರಾಟ್ಪರ್ಜನ್ಯ ಸಂಜ್ಞಾದೇನಿಯರು ಅಧಮ ೭

ದ್ಯುಸದಿಗಿಂತಲಿ ನೀಚರೆನಿಸುವ
ರನಿಲಪಾಸಿ ದಿವೌಕಸರು ಕೇ
ಚನ ಮುನಿಗಳಿಗೆ ಕಡಮೆ ಸ್ವಾಹಾದೇವಿಗಧಮ ಬುಧ
ಎನಿಸುವಳುಷಾದೇವಿ ನೀಚಳು
ತನಿ ಕಡಮೆ ಕರ್ಮಾಧಿಪತಿ ಸ
ಜ್ವನುತ ಪುಷ್ಕರ ನೀಚನೆನಿಸುವ ಸೂರ್ಯನಂದನಗೆ ೮

ಕೊರತೆಯೆನಿಪರತೀತ್ರಿಋಷಿ ಪು
ಷ್ಕರಗೆ ಊರ್ವಶಿ ಮುಖ್ಯ ಶತರ
ಪ್ಸರರು ತುಂಬುರು ಮುಖರು ಆಜಾನಜರೆನಿಸುತಿಹರು
ಕರೆಸುವುದು ಅನಳಿಗಣ ನಾಲ್ಕು
ತ್ತರ ಚತುರ್ದಶದ್ವ್ಯಷ್ಟಸಾವಿರ
ಹರಿಮಡದಿಯರು ಸಮರೆನಿಸ ವರು ಪಿಂತೆ ಪೇಳ್ದರಿಗೆ ೯

ತದವರರ ನಾಟ್ಯಾತರಪ್ಸರ
ಸುದತಿಯರು ಕೃಷ್ಣಾಂಗ ಸಂಗಿಗ
ಳಿದರ ತರುವಾಯದಲಿ ಚಿರಪಿತರುಗಳು ಇವರಿಂದ
ತ್ರಿದಶ ಗಂಧರ್ವಗಣ ವಿವರಿಂ
ದಧಮ ನರಗಂಧರ್ವರಿವರಿಂ
ದುದಧಿಮೇಖಳ ಪತಿಗಳಧಮರು ನೂರುಗುಣದಿಂದ ೧೦

ಪೃಥ್ವಿಪತಿಗಳಿಗಿಂತ ಶತಮನು
ಜೋತ್ತಮರು ಕಡಮನಿಪರಿವರಿಂ
ದುತ್ತರೋತ್ತರ ನೂರುಗುಣದಿಂದಧಿಕರಾದವರ
ನಿತ್ಯದಲಿ ಚಿಂತಿಸುತ ನಮಿಸುತ
ಭೃತ್ಯ ನಾನಹುದೆಂಬ ಭಕ್ತರ
ಚಿತ್ತದಲಿ ನೆಲೆಗೊಂಡು ಕರುಣಿಪರಖಿಳ ಸೌಖ್ಯಗಳ ೧೧

ದ್ರುಮಲತಾತೃಣಗುಲ್ಮ ಜೀವರು
ಕ್ರಮದಿ ನೀಚರು ಇವರಿಗಿಂತಾ
ಧಮರೆನಿಸುವರು ನಿತ್ಯಬದ್ಧರಿಗಿಂತಲಜ್ಞಾನಿ
ತಮಸಿಗ್ಯೋಗ್ಯರ ಭೃತ್ಯರಧಮರು
ಅಮರುಷಾದ್ಯಭಿಮಾನಿ ದೈತ್ಯರು
ನಮುಚಿ ಮೊದಲಾದವರಿಗಿಂತಲಿ ವಿಪ್ರಚಿತ್ತಿ ನೀಚ ೧೨

ಅಲಕುಮಿ ತಾ ನೀಚಳೆನಿಪಳು
ಕಲಿಪರಮ ನೀಚತಮನವಗಿಂ
ತುಳಿದ ಪಾಪಿಗಳಿಲ್ಲ ನೋಡಲು ಈ ಜಗತ್ರಯದಿ
ಮಲವಿಸರ್ಜನ ಕಾಲದಲಿ ಕ
ತ್ತಲೆಯೊಳಗೆ ಕಶ್ಮಲಕುಮಾರ್ಗ
ಸ್ಥಳಗಳಲಿ ಚಿಂತನೆಯ ಮಾಳ್ಪುದು ಬಲ್ಲವರು ನಿತ್ಯ ೧೩

ಸತ್ವ ಜೀವರು ಮಾನಿ ಬ್ರಹ್ಮನು
ನಿತ್ಯಬದ್ಧರೊಳಗೆ ಪುರಂಜನ
ದೈತ್ಯ ಸಮುದಾಯಾಧಿಪತಿ ಕಲಿಯೆನಿಪ ಪವಮಾನ
ನಿತ್ಯದಲಿ ಅವರೊಳಗೆ ಕರ್ಮಪ್ರ
ವರ್ತಕನು ತಾನಾಗಿ ಶ್ರೀ ಪುರು
ಷೋತ್ತಮನ ಸಂಪ್ರೀತಿಗೋಸುಗ ಮಾಡಿಮಾಡಿಸುವ ೧೪

ಪ್ರಾಣದೇವನು ತ್ರಿವಿಧರೊಳಗೆ ಪ್ರ
ವೀಣ ತಾನೆಂದೆನಿಸಿ ಅಧಿಕಾ
ರಾನುಸಾರದಿ ಕರ್ಮಗಳ ತಾ ಮಾಡಿ ಮಾಡಿಸುವ
ಜ್ಞಾನಭಕ್ತಿ ಸುರರ್ಗೆ ಮಿಶ್ರ
ಜ್ಞಾನ ಮಧ್ಯಮ ಜೀವರಿಗೆ ಅ
ಜ್ಞಾನ ಮೋಹದ್ವೇಷಗಳ ದೈತ್ಯರಿಗೆ ಕೊಡುತಿಪ್ಪ ೧೫

ದೇವದೈತ್ಯರ ತಾರತಮ್ಯವ
ನೀ ವಿಧದಿ ತಿಳಿದೆಲ್ಲರೊಳು ಲ
ಕ್ಷ್ಮೀವರನೆ ಸರ್ವೋತ್ತಮನು ಎಂದರಿದು ನಿತ್ಯದಲಿ
ಸೇವಿಸುವ ಭಕ್ತರಿಗೊಲಿದು ಸುಖ
ವೀವ ಸರ್ವತ್ರದಲಿ ಸುಖಮಯ
ಶ್ರೀ ವಿರಿಂಚಾದ್ಯಮರನುತ ಜಗನ್ನಾಥ ವಿಠಲನು ೧೬

ಅಂತು ಸಂಧಿ ೨೯ಕ್ಕೆ ಪದ್ಯಗಳು ೬೬೦ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು



# ಸಂಧಿ ೩೦ "ದೈತ್ಯತಾರತಮ್ಯ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಶ್ರೀಶ ಮುಕ್ತಾಮುಕ್ತ ಸುರವರ
ವಾಸುದೇವಗೆ ಭಕ್ತಿಯಲಿ ಕಮ
ಲಾಸನನು ಪೇಳದನು ದೈತ್ಯಸ್ವಭಾವ ಗುಣಗಳನು ಸಂಧಿ ಸೂಚನೆ

ಎನಗೆ ನಿನ್ನಲಿ ಭಕ್ತಿ ಜ್ಞಾನಗ
ಳೆನಿತಿಹವು ಪ್ರಾಣನಲಿ ತಿಳಿಯದೆ
ಹನುಮದಾದ್ಯವತಾರಗಳ ಭೇದಗಳ ಪೇಳುವವ
ದನುಜಘೋರಂಧಂತಮಸಿಗ್ಯೋ
ಗ್ಯನು ನಸಂಶಯ ನಿನ್ನ ಬೈವರ
ಕೊನೆಯ ನಾಲಿಗೆಪಿಡಿದು ಛೇದಿಪೆನೆಂದನಬ್ಜಭವ ೧

ಜ್ಞಾನಬಲಸುಖ ಪೂರ್ಣವ್ಯಾಪ್ತಗೆ
ಹೀನಗುಣ ಪೇಳುವವನೀಶ್ವರ
ನಾನೆಯೆಂಬುವ ಸಚ್ಚಿದಾನಂದಾತ್ಮಗುತ್ಪತ್ತಿ
ಶ್ರೀನಿತಂಬಿನಿ ಗೀಶಗೆ ವಿಯೋ
ಗಾನು ಚಿಂತನೆ ಭೇದ ಭೇದ ವಿ
ಹೀನದೇಹಗೆ ಶಸ್ತ್ರಗಳಭಯ ಪೇಳುವವ ದೈತ್ಯ ೨

ಲೇಶಭಯ ಶೋಕಾದಿ ಶೂನ್ಯಗೆ
ಕ್ಲೇಶಗಳ ಪೇಳುವವ ರಾಮ
ವ್ಯಾಸರೂಪಂಗಳಿಗೆ ಋಷಿ ವಿಪ್ರತ್ವ ಪೇಳುವವ
ದಾಶರಥಿ ಕೃಷ್ಣಾದಿ ರೂಪಕೆ
ಕೇಶಖಂಡನೆ ಪೇಳ್ವ ಮುಕ್ತಾಳಿ
ಗೋಸುಗ ಶಿವಾರ್ಚನೆಯ ಮಾಡಿದನೆಂಬುವನೆ ದೈತ್ಯ ೩

ಪಾಪಪರಿಹಾರಾರ್ಥ ರಾಮ ಉ
ಮಾಪತಿಯ ನಿರ್ಮಿಸಿದ ಭಗವ
ದ್ರೂಪರೂಪಕೆಭೇದಚಿಂತನೆ ಮಾಳ್ಪಮಾನವನು
ಆಪಗಳು ಸತ್ತೀರ್ಥ ಗುರುಮಾ
ತಾಪಿತೃಪ್ರಮು ಪ್ರತಿಮಭೂತ ದ
ಯಾಪರರ ಕಂಡವರೆ ದೇವರು ಎಂಬುವನೆ ದೈತ್ಯ ೪

ಸುಂದರ ಸ್ವಯಂವ್ಯಕ್ತವು ಚಿದಾ
ನಂದ ರೂಪಗಳೆಂಬುವನು ನರ
ನಿಂದ ನಿರ್ಮಿತ ಈಶ್ವರಗೆ ಅಭಿನಮಿಸ ತಿಹ ನರನು
ಕಂದುಗೊರಳ ದಿವಾಕರನು ಹರಿ
ಯೊಂದೆ ಸೂರ್ಯಸುರೋತ್ತಮು ಜಗ
ದ್ವಂದ್ಯನೆಂಬುವ ವಿಷ್ಣುದೂಷಣೆ ಮಾಡಿದವ ದೈತ್ಯ ೫

ನೇಮದಿಂದಶ್ವತ್ಥ ತುಳಸೀ
ಸೋಮಧರನಲಿ ವಿಮಲ ಸಾಲಿ
ಗ್ರಾಮಗಳ ನಿಟ್ಟಭಿನಮಿಸ ನರ ಮುಕ್ತಿಯೋಗ್ಯಪದ
ಭೂಮಿಯೊಳು ಧರ್ಮಾರ್ಥ ಮುಕ್ತಿಸು
ಕಾಮಪೇಕ್ಷೆಗಳಿಂದ ಸಾಲಿ
ಗ್ರಾಮಗಳ ವ್ಯತಿರಿಕ್ತ ವಂದಿಸೆ ದುಃಖವೈದುವನು ೬

ವಿತತ ಮಹಿಮನ ಬಿಟ್ಟು ಸುರರಿಗೆ
ಪೃಥಕು ವಂದನೆಮಾಳ್ಪ ಮಾನವ
ದಿತಿಜನೇ ಸರಿ ಹರಿಯು ತಾ ಸಂಸ್ಥಿತನೆನಿಸನಲ್ಲಿ
ಚತುರಮುಖ ಮೊದಲಾದಖಿಳ ದೇ
ವತೆಗಳೊಳಗಿಹನೆಂದು ಲಕ್ಷ್ಮೀ
ಪತಿಗೆ ವಂದಿಸಲೊಂದರಕ್ಷಣ ಬಿಟ್ಟಗಲನವರು ೭

ಶೈವ ಶೂದ್ರಕರಾರ್ಚಿತ ಮಹಾ
ದೇವ ವಾಯು ಹರಿ ಪ್ರತಿಮೆ ವೃಂ
ದಾವನದಿ ಮೂಸದ್ವಯದೊಳಿಹ ತುಳಸಿಯಪ್ರಸವ
ಗೋ ವಿವಾಹವಿವರ್ಜಿತಶ್ವ
ತ್ಥವಿಟಪಿಗಳ ಭಕ್ತಿ ಪೂರ್ವಕ
ಸೇವಿಸುವ ನರ ದೈತ್ಯ ಶಾಶ್ವತ ದುಃಖವೈದುವನು ೮

ಕಮಲ ಸಂಭವ ಮುಖ್ಯ ಮನುಜೋ
ತ್ತಮರ ಪರಿಯಂತರದಿ ಮುಕ್ತರು
ಸಮ ಶತಾಯುಷ್ಯಳ್ಳವನು ಕಲಿಬ್ರಹ್ಮನೋಪಾದಿ
ಕ್ರಮದಿ ನೀಚರು ದೈತ್ಯರು ನರಾ
ಧಮರ ಪಿಡಿದು ಕುಲಕ್ಷ್ಮ್ರಕಲಿಯನು
ಪಮರೆನಿಸುವವರಸುರರೊಳು ದ್ವೇಷಾದಿ ಗುಣದಿಂದ ೯

ವನಜ ಸಂಭವನಬ್ದ ಶತ ಓ
ಬ್ಬನೆ ಮಹಾ ಕಲಿಶಬ್ದವಾಚ್ಯನು
ದಿನ ದಿನಗಳಲಿ ಬೀಳ್ವ ರಂಥಂತಮದಿ ಕಲಿಮಾರ್ಗ
ದನುಜರೆಲ್ಲ ಪ್ರತೀಕ್ಷಿಸುತ ಬ್ರ
ಹ್ಮನ ಶತಾಬ್ದಾಂತದಲಿ ಲಿಂಗವು
ಅನಿಳನ ಗದಾಪ್ರಹರದಿಂದಲಿ ಭಂಗವೈದುವರು ೧೦

ಮಾರುತನ ಗದೆಯಿಂದ ಲಿಂಗ ಶ
ರೀರ ಪೋದಾನಂತರ ತಮೋ
ದ್ವಾರ ವೈದಿಸ್ವರೂಪ ದುಃಖಗಳನುಭವಿಸುತಿಹರು
ವೈರ ಹರಿಭಕ್ತರಲಿ ಹರಿಯಲಿ
ತಾರತಮ್ಯದಲಿರುತಿಹುದು ಸಂ
ಸಾರದಲ್ಲಿ ತಮಸ್ಸಿನಲಿ ಅತ್ಯಧಿಕ ಕಲಿಯಲ್ಲಿ ೧೧

ಜ್ಞಾನವೆಂಬುದು ಮಿಥ್ಯವಸಮಾ
ಚೀನ ದುಃಖತರಂಗವೇ ಸಮಿ
ಚೀನ ಬುದ್ಧಿ ನಿರಂತರದಿ ಕಲಿಗಿಹುದು ಭೃತ್ಯರೊಳು
ಹೀನಳೆನಿಪಳು ಶತಗುಣದಿ ಕಲಿ
ಮಾನಿನಿಗೆ ಶತವಿಪ್ರಚಿತ್ತಿಗೆ
ಊನಶತಗುಣ ಕಾಲನೇಮಿಯೆ ಕಂಸನೆನಿಸುವನು ೧೨

ಕಾಲನೇಮಿಗೆ ಪಂಚಗುಣದಿಂ
ಕೀಳು ಮಧುಕೈಟಭರು ಜನ್ಮವ
ತಾಳಿ ಇಳೆಯೊಳು ಹಂಸಡಿಬಿಕಾಹ್ವಯದಿ ಕರೆಸಿದರ
ಏಳನಾಮಕ ವಿಪ್ರಚಿತ್ತಿಸ
ಮಾಳು ಎನಿಪ ಹಿರಣ್ಯಕಶಿಪುವು
ಶೂಲಪಾಣಿಯ ಭಕ್ತ ನರಕಗೆ ಶತಗುಣಾಧಮನು ೧೩

ಗುಣಗಳತ್ರಯ ನೀಚನೆನಿಸುವ
ಕನಕಕಶಿಪುಗೆ ಹಾಟಕಾಂಬಕ
ಗೆಣೆಯೆನಿಪ ಮಣಿಮಂತಗಿಂತಲಿ ಕಿಂಚದೂನ ಬಕ
ದನುಜವರ ತಾರಕನು ವಿಂಶತಿ
ಗುಣದಿ ನೀಚನು ಲೋಕಕಂಟಕ
ನೆನಿಪ ಶಂಬರ ತಾರಕಾಸುರಗಧಮ ಷಡ್ಗುಣದಿ ೧೪

ಸರಿಯೆನಿಸುವನುಸಾಲ್ವನಿಗೆ ಶಂ
ಬರನಿಗಧಮನು ದಶಗುಣದಿ ಶಂ
ಬರಗೆ ಷಡ್ಗುಣ ನೀಚನೆನಿಪ ಹಿಡಂಬಕಾ ಬಾಣಾ
ಸುರನು ದ್ವಾಪರ ಕೀಚಕನು ಸಾ
ಲ್ವರು ಸಮರು ದ್ವಾಪರನೆ ಶಕುನಿಯು
ಕರಸಿದನು ಕೌರವಗೆ ಸೋದರಮಾವನಹ ದೆಂದು ೧೫

ನಮುಚಿ ಇಲ್ವಲ ಪಾಕನಾಮಕ
ಸಮರು ಬಾಣಾದ್ಯರಿಗೆ ದಶಗುಣ
ನಮುಚಿ ನೀಚನು ನೂರುಗುಣದಿಂದಧಮ ವಾತಾಪಿ
ಕುಮತಿಧೇನುಕ ನೂರುಗುಣದಿಂ
ದಮುರರಿಪುವಾತಾಪಿಗಧಮನು
ವಮನಧೇನುಕನಿಂದಲರ್ಧ ಗುಣಾಧಮನು ಕೇಶಿ ೧೬

ವೃತ್ತಿ ಕೇಶೀನಾಮಕ ತೃಣಾ
ವರ್ತ ಸಮಲವಣಾಸುರನು ಒಂ
ದ್ಹತ್ತು ನೀಚಾರಿಷ್ಟನಾಮಕ ಪಂಚಗುಣದಿಂದ
ದೈತ್ಯ ಸತ್ತಮ ಹಂಸಡಿಭಕ ಪ್ರ
ವೃತ್ತವೇನನು ಪೌಂಡ್ರಕನು ಎಂ
ಭತ್ತು ಗುಣದಿಂದಧಮ ಮೂವರು ಲವಣನಾಮಕಗೆ ೧೭

ಈಶನೇ ನಾನೆಂಬ ಖಳ ದು
ಶ್ಶಾಸನಾ ವೃಷಸೇನ ದೈತ್ಯಾ
ಗ್ರೇಸರ ಜರಾಸಂಧಸಮ ಪಾಪಿಗಳೊಳತ್ಯಧಿಕ
ಕಂಸ ಕೂಪವಿಕರ್ಣ ಸರಿ ರು
ಗ್ಮೀಶತಾಧಮ ರುಗ್ಮಿಗಿಂತ ಮು
ಹಾಸುರನು ಶತಧನ್ವಿ ಕಿನ್ನಿರ್ಮಾರರು ಶತಾಧಮರು ೧೮

ಮದಿರಪಾನೀ ದೈತ್ಯಗಣದೊಳ
ಗಧಮರೆನಿಪರು ಕಾಲಕೇಯರು
ಅಧಿಕರಿಗೆ ಸಮರಹರು ದೇವಾವೇಶ ಬಲದಿಂದ
ವದನವಾಣೀ ಪಾದ ಶ್ರೋತ್ರಿಯು
ಗುದವುಪಸ್ಥಘ್ರಾಣ ತ್ವಗ್ರಸ
ಕಧಿಪದೈತ್ಯರು ನೀಚರೆನಿಪರು ಕಾಲಕೇಯರಿಗೆ ೧೯

ಜ್ಞಾನ ಕರ್ಮೇಂದ್ರಿಯಗಳಿಗೆ ಅಭಿ
ಮಾನಿ ಕಲ್ಯಾದ್ಯಖಿಳದಿತಿಜರು
ಹೀನಕರ್ಮವ ಮಾಡಿ ಮಾಡಿಸುತಿಹರು ಸರ್ವರೊಳು
ವಾಣಿ ಭಾರತಿ ಕಮಲಭವ ಪವ
ಮಾನರಿವರಚ್ಛಿನ್ನ ಭಕ್ತರು
ಪ್ರಾಣವಸುರಾವೇಶ ರಹಿತರು ಆಖಣಾಶ್ಮಸಮ ೨೦

ಹುತವಹಾಕ್ಷಾದ್ಯಮರರೆಲ್ಲಾ
ಯುತರು ಕಲ್ಯಾವೇಶ ವಿಧಿಮಾ
ರುತ ಸರಸ್ವತಿ ಭಾರತಿಯರವತಾರದೊಳಗಿಲ್ಲ
ಕೃತಪುಟಾಂಜಲಿಯಿಂದ ತನ್ನಯ
ಪಿತನ ಸಮ್ಮುಖದಲ್ಲಿ ನಿಂದಾ
ನತಿಸಿ ಬಿನ್ನೈಸಿದನು ಎನ್ನೊಳು ಕೃಪೆಯಮಾಡೆಂದು ೨೧

ದ್ವೇಷದೈತ್ಯರ ತಾರತಮ್ಯವು
ದೂಷಣೆಯು ಭೂಷಣಗಳೆನ್ನದೆ
ದೋಷವೆಂಬುವ ದ್ವೇಷಿ ನಿಶ್ಚಯ ಇವರ ನೋಡಲ್ಕೆ
ಕ್ಲೇಶಗಳನೈದುವನು ಬಹು ವಿಧ
ಸಂಶಯವ ಬಡೆಸಲ್ಲ ವೇದ
ವ್ಯಾಸ ಗರುಡ ಪುರಾಣದಲಿ ಪೇಳಿದನು ಋಷಿಗಳಿಗೆ ೨೨

ಜಾಲಿನೆಗ್ಗಿಲು ಕ್ಷುದ್ರಶಿಲೆ ಬರಿ
ಗಾಲ ಪುರುಷನ ಬಾಧಿಪುವು ಚ
ಮ್ಮೋಳಿಗೆಯ ಮೆಟ್ಟಿದವಗುಂಟೇ ಕಂಟಕಗಳ ಭಯು
ಚೇಳು ಸರ್ಪವ ಕೊಂದ ವಾರ್ತೆಯು
ಕೇಳಿ ಮೋದಿಪಗಿಲ್ಲವಘ ಯಮ
ನಾಳುಗಳ ಭಯವಿಲ್ಲ ದೈತ್ಯರನಿಂದಿಸುವ ನರಗೆ ೨೩

ಪುಣ್ಯ ಕರ್ಮವ ಪುಷ್ಕರಾದಿ ಹಿ
ರಣ್ಯಗರ್ಭಾಂತರ್ಗತ ಬ್ರ
ಹ್ಮಣ್ಯದೇವನಿಗರ್ಪಿಸುತಲಿರು ಪುಣ್ಯಪಾಪಗಳ
ಜನ್ಯ ದುಃಖವ ಕಲಿವ ಖಾದ್ಯಾರಿ
ಗುಣ್ಣಲೀವನು ಸಕಲ ಲೋಕ ಶ
ರಣ್ಯ ಶಾಶ್ವತ ಮಿಶ್ರಜನರಿಗೆ ಮಿಶ್ರ ಫಲನೀವ ೨೪

ತ್ರಿವಿಧ ಗುಣಗಳ ಮಾನಿ ಶ್ರೀ ಭೂ
ರ್ವಿರಮಣಾ ಗುಣಿಗಣಗಳೊಳಗವ
ವರ ಯೋಗ್ಯತೆ ಕರ್ಮಗಳನನುಸರಿಸಿ ಕರ್ಮಫಲ
ಸ್ವವಶರಾದಮರಾಸುರರ ಗಣ
ಕವಧಿಯಿಲ್ಲದೆ ಕೊಡುವ ದೇವ
ಪ್ರವರವರ ಜಗನ್ನಾಥ ನಿರ್ಮಲ ವಿಶ್ವವ್ಯಾಪಕನು ೨೫

ಅಂತು ಸಂಧಿ ೩೦ಕ್ಕೆ ಪದ್ಯಗಳು ೯೦೭ಕ್ಕೆ ಮಂಗಳಂ

ಶ್ರೀ ಕೃಷ್ಣಾರ್ಪಣಮಸ್ತು



## ಸಂಧಿ ೩೧ "ನೈವೇದ್ಯಪ್ರಕರಣ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ಪ

ಲೆಕ್ಕಿಸದೆ ಲಕುಮಿಯನು ಬೊಮ್ಮನ
ಪೊಕ್ಕುಳಿಂದಲಿ ಪಡೆದ ಪೊಸಪೊಂ
ಬಕ್ಕಿದೇರನು ಪಡೆದವಯವಗಳಿಂದ ದಿವಿಜರನು
ಮಕ್ಕಳಂದದಿ ಪೊರೆವ ಸರ್ವದ
ರಕ್ಕಸಾಂತಕ ಕರುಣದೊಳು ನಿ
ರ್ದುಃಖ ಸುಖಮಯ ಕಾಯ್ದ ಪಾರ್ಥನ ಸೂತನೆಂದೆನಿಸಿ ೧

ದೋಷ ಗಂಧವಿದೂರ ನಾನಾ
ವೇಷಧಾರಿ ವಿಚಿತ್ರ ಕರ್ಮ ವಿ
ಶೇಷ ಮಾಯಾರಮಣ ಮಧ್ವಾಂತಃಕರಣ ರೂಪ
ಶೇಷಶಾಯಿ ಶರಣ್ಯ ಕೌಸ್ತುಭ
ಭೂಷಣ ಸುಕಂಧರ ಸದಾಸಂ
ತೋಷ ಬಲಸೌಂದರ್ಯ ಸಾರನ ಮಹಿಮೆಗೇನೆಂಬ ೨

'ಸಾಶನಾನಶನೇಅಭೀ'ಯೆಂ
ಬೀಶ್ರುತಿ ಪ್ರತಿಪಾದ್ಯನೆನಿಸುವ
ಕೇಶವನ ರೂಪದ್ವಯವ ಚಿದ್ದೇಹದೊಳ ಹೊರಗೆ
ಬೇಸರದೆ ಸದ್ಭಕ್ತಿಯಿಂದ ಉ
ಪಾಸನೆಯ ಗೈಯುತ್ತ ಬುಧರು ಹು
ತಾಶನನವೋಲಿಪ್ಪನೆಂದನವರತ ತುತಿಸುವರು ೩

ಸಕಲ ಸದ್ಗುಣಪೂರ್ಣ ಜನ್ಮಾ
ದ್ಯಖಿಳ ದೋಷವಿದೂರ ಪ್ರಕಟಾ
ಪ್ರಕಟ ಸದ್ವ್ಯಾಪ್ಯಾಗತ ಸಂಸಾರಿ ಕಂಸಾರಿ
ಸಕುಲ ನಾನಾರೂಪ ನಿಯ್ಯಾ
ಮಕ ನಿಯಮ್ಯ ನಿರಾಮಯ ರವಿ
ಪ್ರಕರ ಸನ್ನಿಭಪ್ರಭು ಸದಾಮಾಂ ಪಾಹಿ ಪರಮಾತ್ಮ ೪

ಚೇತನಾಚೇತನ ಜಗತ್ತಿನೊ
ಳಂತ ತನು ತಾನಾಗಿ ಲಕುಮಿಾ
ನಾಥ ಸರ್ವರೊಳಿಪ್ಪ ತತ್ತದ್ರೂಪಗಳ ಧರಿಸಿ
ಜಾತಿಗಾರನ ತೆರದಿ ಎಲ್ಲರ
ಮಾತಿನೊಳಗಿದ್ದಖಿಳ ಕರ್ಮವ
ತಾ ತಿಳಿಸಿಕೊಳ್ಳದಲೆ ಮಾಡಿಸಿ ನೋಡಿ ನಗುತಿಪ್ಪ ೫

ವೀತಭಯ ವಿಜ್ಞಾನದಾಯಕ
ಭೂತ ಭವ್ಯ ಭವತ್ಪ್ರಭು ಖಳಾ
ರಾತಿ ಖಗವರ ವಹನ ಕಮಲಾಕಾಂತ ನಿಶ್ಚಿಂತ
ಮಾತರಿಶ್ವಪ್ರಿಯ ಪುರಾತನ
ಪೂತನಾ ಪ್ರಾಣಾಪಹಾರಿ ವಿ
ಧಾತೃ ಜನಕ ವಿಪಶ್ಚಿತರ ಪ್ರಿಯ ಸಲಹು ಸಲಹೆಮ್ಮ ೬

ದುಷ್ಟಜನ ಸಂಹಾರಿ ಸರ್ವೋ
ತ್ಕೃಷ್ಟಮಹಿಮ ಸಮಿಾರನುತ ಸಕ
ಲೇಷ್ಟದಾಯಕ ಸ್ವರತ ಸುಖಮಯ ಮುಮಕುಲಸ್ವಾಮಿ
ಹೃಷ್ಟಪುಷ್ಟಕನಿಷ್ಟ ಸೃಷ್ಟ್ಯಾ
ದೃಷ್ಟಕರ್ತ ಕರೀಂದ್ರವರದ ಯ
ಥೇಷ್ಟತನು ಉನ್ನತ ಸುಕರ್ಮಾ ನಮಿಪೆ ನನವರತ ೭

ಪಾಕಶಾಸನ ಪೂಜ್ಯಚರಣ ಪಿ
ನಾಕಿ ಸನ್ನುತ ಮಹಿಮ ಸೀತಾ
ಶೋಕನಾಶನ ಸುಲಭ ಸುಮುಖ ಸುವರ್ಣವರ್ಣನಿಭ
ಮಾಕಳತ್ರ ಮನೀಷಿ ಮಧುರಿಪು
ಏಕಮೇವಾದ್ವಿತಿಯ ರೂಪ ಪ್ರ
ತೀಕ ದೇವಗಣಾಂತರಾತ್ಮಕ ಪಾಲಿಸುವುದೆಮ್ಮ ೮

ಅಪ್ರಮೇಯೋನ್ನತ ಸ್ವರೂಪ ಸ
ದಾಪ್ರಸನ್ನ ಮುಖಾಬ್ಜ ಮುಕ್ತಿ ಸು
ಖಪ್ರದಾಯಕ ಸುಮನಸಾರಾಧಿತ ಪದಾಂಭೋಜ
ಸ್ವಪ್ರಕಾಶ ಸ್ವತಂತ್ರ ಸರ್ವಗ
ಕ್ಷಿಪ್ರ ಫಲದಾಯಕ ಕ್ಷಿತೀಶ ಯ
ದುಪ್ರವೀರ ವಿತರ್ಕ ವಿಶ್ವಸುತೈಜಸ ಪ್ರಾಜ್ಞ ೯

ಗಾಳಿ ನಡೆವಂದದಲಿ ನೀಲ ಘ
ನಾಳಿ ವರ್ತಿಸುವಂತೆ ಬ್ರಹ್ಮತ್ರಿ
ಶೂಲಧರ ಶಕ್ರಾರ್ಕ ಮೊದಲಾದಖಿಳ ದೇವಗಣ
ಕಾಲಕರ್ಮ ಗುಣಾಭಿಮಾನಿ ಮ
ಹಾಲಕುಮಿಯನುಸರಿಸಿ ನಡೆವಳು
ಮೂಲಕಾರಣ ಮುಕ್ತಿದಾಯಕ ಹರಿಯೆನಿಸಿಕೊಂಬ ೧೦

ಮೋಡ ಕೈಬೀಸಣಿಕೆಯಿಂದಲಿ
ಓಡಿಸುವೆನೆಂಬನ ಪ್ರಯತ್ನವು
ಕೂಡುವುದೆ ಕಲ್ಪಾಂತಕಾದರು ಲಕುಮಿ ವಲ್ಲಭನ
ಜೋಡುಕರ್ಮವ ಜೀವರೊಳು ತಾ
ಮಾಡಿ ಮಾಡಿಸಿ ಫಲಗಳುಣಿಸುವ
ಪ್ರೌಢರಾದವರಿವನ ಭಜಿಸಿ ಭವಾಬ್ಧಿ ದಾಟುವರು ೧೧

ಕ್ಲೇಶ ಮೋಹಾಜ್ಞಾನ ದೋಷ ವಿ
ನಾಶಕ ವಿರಿಂಚಾಂಡದೊಳಗಾ
ಕಾಶದೋಪಾದಿಯಲಿ ತುಂಬಿಹನೆಲ್ಲ ಕಾಲದಲಿ
ಘಾಸಿಗೊಳಿಸದೆ ತನ್ನವರನಾ
ಯಾಸ ಸಂರಕ್ಷಿಸುವ ಮಹ ಕರು
ಣಾಸಮುದ್ರ ಪ್ರಸನ್ನ ವದನಾಂಭೋಜ ವೈರಾಜ ೧೨

ಕನ್ನಡಿಯ ಕೈಪಿಡಿದು ನೋಳ್ಪನ
ಕಣ್ಣುಗಳು ಕಂಡಲ್ಲಿ ಎರಗದೆ
ತನ್ನವೋಲ್ ಪ್ರತಿಬಿಂಬ ಕಾಂಬುವ ದರ್ಪಣವ ಬಿಟ್ಟು
ಧನ್ಯರಿಳೆಯೊಳಗೆಲ್ಲ ಕಡೆಯಲಿ
ನಿನ್ನ ರೂಪವ ನೋಡಿ ಸುಖಿಸುತ
ಸನ್ನುತಿಸುತಾನಂದ ವಾರಿಧಿಯೊಳಗೆ ಮುಳುಗಿಹರು ೧೩

ಅನ್ನಮಾನಿ ಶಶಾಂಕನೊಳು ಕಾ
ರುಣ್ಯಸಾಗರ ಕೇಶವನು ಪರ
ಮಾನ್ನದೊಳು ಭಾರತಿಯು ನಾರಾಯಣನು ಭಕ್ಷ್ಯದೊಳು
ಸೊನ್ನಗದಿರನು ಮಾಧವನು ಶ್ರುತಿ
ಸನ್ನುತ ಶ್ರೀ ಲಕ್ಷ್ಮಿ ಘೃತದೊಳು
ಮಾನ್ಯ ಗೋವಿಂದಾಭಿಧನು ಇರುತಿಪ್ಪನೆಂದೆಂದು ೧೪

ಕ್ಷೀರಮಾನಿ ಸರಸ್ವತಿ ಜಗ
ತ್ಸಾರ ವಿಷ್ಣುವ ಚಿಂತಿಸುವುದು ಸ
ರೋರುಹಾಸನ ಮಂಡಿಗೆಯೊಳಿರುತಿಪ್ಪ ಮಧುವೈರಿ
ಮಾರುತನು ನವನೀತನೊಳು ಸಂ
ಪ್ರೇರಕ ತ್ರಿವಿಕ್ರಮನು ದಧಿಯೊಳು
ವಾರಿನಿಧಿ ಚಂದ್ರಮರೊಳಗೆ ಇರುತಿಪ್ಪ ವಾಮನನು ೧೫

ಗರುಡ ಸೂಪಕೆಮಾನಿ ಶ್ರೀಃ ಶ್ರೀ
ಧರನು ದೇವತೆ ಪತ್ರ ಶಾಖಕೆ
ವರನೆನಿಪ ಮಿತ್ರಾಖ್ಯ ಸೂರ್ಯ ಹೃಷೀಕಪನ ಮೂರ್ತಿ
ಉರಗರಾಜನು ಫಲ ಸುಶಾಖಕೆ
ವರನೆನಿಸುವನು ಪದ್ಮನಾಭನ
ಸ್ಮರಿಸಿ ಭುಂಜಿಸುತಿಹರು ಬಲ್ಲವರೆಲ್ಲ ಕಾಲದಲಿ ೧೬

ಗೌರಿ ಸರ್ವಾಮ್ಲಸ್ಥಳೆನಿವಳು
ಶೌರಿ ದಾಮೋದರನ ತಿಳಿವುದು
ಗೌರಿ ಪಾನಾಮ್ಲಸ್ಥ ಸಂಕರುಷಣನ ಚಿಂತಿಪುದು
ಸಾರಶರ್ಕರಗುಡದೊಳಗೆ ವೃ
ತ್ರಾರಿ ಇರುತಿಹ ವಾಸುದೇವನ
ಸೂರಿಗಳು ಧೇನಿಪರು ಪರಮಾದರದಿ ಸರ್ವತ್ರ ೧೭

ಸ್ಮರಿಸು ವಾಚಸ್ಪತಿಯ ಸೋಪ
ಸ್ಕರದೊಳಗೆ ಪ್ರದ್ಯುಮ್ನನಿಪ್ಪನು
ನಿರಯಪತಿಯುಮಧರ್ಮ ಕಟುದ್ರವ್ಯದೊಳಗನಿರುದ್ಧ
ಸರಷಪ ಶ್ರೀರಾಮು ರೇಳದಿ
ಸ್ಮರನ ಶ್ರೀಪುರುಷೋತ್ತಮನ ಕ
ರ್ಪುರದಿ ಚಿಂತಿಸಿ ಪೂಜಿಸುತಲಿರು ಪರಮಭಕುತಿಯಲಿ ೧೮

ನಾಲಿಗಿಂದಲಿ ಸ್ವೀಕರಿಪ ರಸ
ಪಾಲು ಮೊದಲಾದುವರೊಳಗೆ ಘೃತ
ತೈಲ ಪಕ್ವಪದಾರ್ಥದೊಳಗಿಹ ಚಂದ್ರನಂದನನು
ಪಾಲಿಸುವಧೋಕ್ಷಜನ ಚಿಂತಿಸು
ಸ್ಥೂಲ ಕೂಷ್ಮಾಂಡ ತಿಲ ಮಾಷಜ
ಈ ಲಲಿತ ಭಕ್ಷ್ಯದೊಳು ದಕ್ಷನು ಲಕ್ಷ್ಮಿನರಸಿಂಹ ೧೯

ಮನುವು ಮಾಷ ಸುಭಕ್ಷ್ಯದೊಳು ಚಿಂ
ತನೆಯ ಮಾಡಚ್ಯುತನ ನಿರುರುತಿ
ಮನೆಯೆನಿಪ ಲವಣದೊಳು ಮರೆಯದೆ ಶ್ರೀ ಜನಾರ್ದನನ
ನೆನೆಯುತಿರು ಫಲರಸಗಳೊಳು ಪ್ರಾ
ಣನ ಉಪೇಂದ್ರನ ವೀಳ್ಯದೆಲೆಯೊಳು
ಧ್ಯಾನದಿ ಹರಿರೂಪವನೆ ಕೊಂಡಾಡುತಲೆ ಸುಖಿಸುತಿರು ೨೦

ವೇದ ವಿನುತಗೆ ಬಂಧನು ಸುಸ್ವಾ
ದೋದಕಾಧಿಪನೆನಿಸಿ ಕೊಂಬನು
ಶ್ರೀದ ಕೃಷ್ಣನತಿಳಿದು ಪೂಜಿಸುತಿರು ನಿರಂತರದಿ
ಸಾಧುಕರ್ಮವ ಪುಷ್ಕರನು ಸುನಿ
ವೇದಿತ ಪದಾರ್ಥಗಳ ಶುದ್ಧಿಯ
ಗೈದುಗೈಸುತ ಹಂಸನಾಮಕಗರ್ಪಿಸುತಲಿಪ್ಪ ೨೧

ರತಿಸಕಲ ಸುಸ್ವಾದರಸಗಳನ
ಪತಿಯೆನಿಸುವಳು ಅಲ್ಲಿ ವಿಶ್ವನು
ಹುತವಹನ ಚೂಲಿಗಳೊಳಗೆ ಭಾರ್ಗವನ ಚಿಂತಿಪುದು
ಕ್ಷಿತಿಜಗೋಮಯ ಜಾದಿಯೊಳು ಸಂ
ಸ್ಥಿತಿಜಗೋಮಯ ಜಾದಿಯೊಳು ಸಂ
ತುತಿಸುತಿರು ಸಂತತ ಸದಾಸದ್ಭಕ್ತಿಪೂರ್ವಕದಿ ೨೨

ಪಾಕಕರ್ತೃಗಳೊಳು ಚತುರ್ದಶ
ಲೋಕಮಾತೆ ಮಹಾಲಕುಮಿಗತ
ಶೋಕವಿಶ್ವಂಭರನ ತಿಳಿವುದು ಎಲ್ಲ ಕಾಲದಲಿ
ಚೌಕಶುದ್ಧ ಸುಮಂಡಲದಿ ಭೂ
ಸೂಕರಾಹ್ವಯ ಉಪರಿಚೈಲಪ
ನೇಕದಂತಸನತ್ಕುಮಾರನ ಧೇನಿಪರು ಬುಧರು ೨೩

ಶ್ರೀನಿವಾಸನ ಭೋಗ್ಯವಸ್ತುವ
ಕಾಣಗೊಡದಂದದಲಿ ವಿಷ್ವ
ಕ್ಸೇನ ಪರಿಖಾರೂಪನಾಗಿಹನಲ್ಲಿ ಪುರುಷಾಖ್ಯ
ತಾನೆ ಪೂಜ್ಯಕ ಪೂಜ್ಯನೆನಿಸಿ ನಿ
ಜಾನುಗರ ಸಂತಯಿಪ ಗುರು ಪವ
ಮಾನವಂದಿತ ಸರ್ವ ಕಾಲಗಳಲ್ಲಿ ಸರ್ವೇಶ ೨೪

ನೂತನ ಸಮಿಾಚೀನ ಸುರಸೋ
ಪೇತ ಹೃದ್ಯ ಪದಾರ್ಥದೊಳು ವಿಧಿ
ಮಾತೆ ತತ್ತದ್ರಸಗಳೊಳು ರಸರೂಪ ತಾನಾಗಿ
ಪ್ರೀತಿ ಬಡಿಸುತ ನಿತ್ಯದಿ ಜಗ
ನ್ನಾಥ ವಿಠಲನ ಕೂಡಿ ತಾ ನಿ
ರ್ಭೀತಳಾಗಿಹಳೆಂದರಿದು ನೀ ಭಜಿಸಿ ಸುಖಿಸುತಿರು ೨೫

ಅಂತು ಸಂಧಿ ೩೧ಕ್ಕೆ ಪದ್ಯಗಳು ೯೩೦ಕ್ಕೆ ಮಂಗಳಂ

ಶ್ರೀಕೃಷ್ಣಾರ್ಪಣಮಸ್ತು



# ಸಂಧಿ ೩೦ "ಕಕ್ಷತಾರತಮ್ಯ ಸಂಧಿ"

ಹರಿಃ ಓಂ

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದ ನಾದರದಿ ಕೇಳುವುದು ಪ.

ಶ್ರೀರಮಣ ಸರ್ವೇಶ ಸರ್ವಗ
ಸಾರಭೋಕ್ತ ಸ್ವತಂತ್ರ ದೋಷ ವಿ
ದೂರ ಜ್ಞಾನಾನಂದ ಬಲವೈಶ್ವರ್ಯ ಪರಿಪೂರ್ಣ
ಮೂರುಗುಣ ವರ್ಜಿತ ಸಗುಣ ಸಾ
ಕಾರ ವಿಶ್ವ ಸ್ಥಿತಿಲಯೋದಯ
ಕಾರಣ ಕೃಪಾಸಾಂದ್ರ ನರಹರೆ ಸಲಹೊ ಸಜ್ಜನರ ೧

ನಿತ್ಯ ಮುಕ್ತಳೆ ನಿರ್ವಿಕಾರಳೆ
ನಿತ್ಯ ಸುಖಸಂಪೂರ್ಣೆ ನಿತ್ಯಾ
ನಿತ್ಯ ಜಗದಾಧಾರೆ ಮುಕ್ತಾಮುಕ್ತಗಣವಿನುತ
ಚಿತ್ತಯಿಸು ಬಿನ್ನಪವ ಶ್ರೀ ಪುರು
ಷೋತ್ತಮನ ವಕ್ಷೋನಿವಾಸಿನಿ
ಭೃತ್ಯವತ್ಸಲೆ ಕಾಯೆ ತ್ರಿಜಗನ್ಮಾತೆ ವಿಖ್ಯಾತ ೨

ರೋಮ ಕೂಪಗಳೊಳಗೆ ಪೃಥು ಪೃಥ
ಕಾಮಹಾಪುರುಷನ ಸುಮೂರ್ತಿಯ
ತಾಮರಸ ಜಾಂಡಗಳ ತದ್ಗತ ವಿಶ್ವರೂಪಗಳ
ಶ್ರೀ ಮಹಿಳೆ ರೂಪಗಳ ಗುಣಗಳ
ಸೀಮೆಗಾಣದೆ ಯೋಚಿಸುತ ಮಮ
ಸ್ವಾಮಿ ಮಹಿಮೆಯದೆಂತುಟೆಂದಡಿಗಡಿಗೆ ಬೆರಗಾದ ೩

ಒಂದಜಾಂಡದೊಳೊಂದೆ ರೂಪದೊ
ಳೊಂದವಯವದೊಳೊಂದು ನಖದೊಳ
ಗೊಂದು ಗುಣಗಳ ಪಾರಗಾಣದೆ ಕೃತಪುಟಾಂಜಲಿಯಿಂ
ಮಂದಜಾಸನ ಪುಳಕ ಪುಳಕಾ
ನಂದ ಬಾಷ್ಪದ ತೊದಲ ನುಡಿಯಿಂ
ಇಂದಿರಾವಲ್ಲಭನ ಮಹಿಮೆಗಭೀರತರವೆಂದ ೪

ಏನುಧನ್ಯರೊ ಬ್ರಹ್ಮಗುರುಪವ
ಮಾನರೀರ್ವರು ಈ ಪರಿಯಲಿ ರ
ಮಾನಿವಾಸನ ವಿಮಲ ಲಾವಣ್ಯಾತಿಶಯಗಳನು
ಸಾನುರಾಗದಿ ನೋಡಿ ಸುಖಿಪ
ಮಹಾನುಭಾವರ ಭಾಗ್ಯವೆಂತೊ ಫ
ವಾನಿಧವನಿಗಸಾಧ್ಯವೆನಿಸಲು ನರರ ಪಾಡೇನು ೫

ಆ ಪಿತಾಮಹ ನೂರುಕಲ್ಪ ರ
ಮಾಪತಿಯ ಗುಣಜಪಿಸಿ ಒಲಿಸಿ ಮ
ಹಾಪರಾಕ್ರಮ ಹನುಮಭೀಮಾನಂದಮುನಿಯನಿಸಿ
ಆ ಪರಬ್ರಹ್ಮನ ಸುನಾಭೀ
ಕೂಪ ಸಂಭವನಾಮದಲಿ ಮೆರೆ
ವಾಪಯೋಜಾಸನ ಸಮೀರರಿಗಾನಮಿಪೆ ನಿತ್ಯ ೬

ವಾಸುದೇವನ ಮೂರ್ತಿಹೃದಯಾ
ಕಾಶಮಂಡಲ ಮಧ್ಯದಲಿ ತಾ
ರೇಶನಂದದಿ ಕಾಣುತತಿ ಸಂತೋಷದಲಿ ತುತಿಪ
ಆ ಸರಸ್ವತಿ ಭಾರತಿಯರಿಗೆ
ನಾ ಸತತ ವಂದಿಸುವೆ ಪರಮೋ
ಲ್ಲಾಸದಲಿ ಸುಜ್ಞಾನ ಭಕುತಿಯ ಸಲಿಸಲೆಮಗೆಂದು ೭

ಜಗದುದರನ ಸುರೋತ್ತಮನ ನಿಜ
ಪೆಗಲೊಳಾಂತು ಕರಾಬ್ಜದೊಳು ಪದ
ಯುಗಧರಿಸೆ ನಖಪಙ್ತಿಯೊಳು ರಮಣೀಯತರವಾದ
ನಗಧರನ ಪ್ರತಿಬಿಂಬಕಾಣುತ
ನಿಗೆಹರುಷದಿಂ ಪೊಗಳಿಹಿಗ್ಗುವ
ತ್ರಿಗುಣಮಾನಿಪ ಕೊಡಲಿ ಮಂಗಳ ಸಕಲ ಸುಜನರಿಗೆ ೮

ಯೋಗಿಗಳ ಹೃದಯಕೆ ನಿಲುಕ ನಿಗ
ಮಾಗಮೈಕವಿನುತನ ಪರಮನು
ರಾಗದಲಿ ದ್ವಿಸಹಸ್ರ ಜಿಹ್ವೆಗಳಿಂದ ವರ್ಣಿಸುವ
ಭೂಗಗನ ಪಾತಾಳ ವ್ಯಾಪ್ತನ
ಯೋಗನಿದ್ರಾಸ್ಪದನೆನಿಪ ಗುರು
ನಾಗರಾಜನ ಪದಕೆ ನಮಿಸುವೆ ಮನದೊಳನವರತ ೯

ನಂದಿವಾಹನ ನಳಿನಿಧರ ಮೌ
ಳೇಂದು ಶೇಖರ ಶಿವತ್ರಿಯಂಬಕ
ಅಂಧಕಾಸುರಮಥನ ಗಜಶಾರ್ದೂಲ ಚರ್ಮಧರ
ಮಂದಜಾಸನತನಯ ತ್ರಿಜಗ
ದ್ವಂದ್ಯ ಶುದ್ಧಸ್ಫಟಿಕಸನ್ನಿಭ
ವಂದಿಸುವೆ ನನವರತ ಪಾಲಿಸು ಪಾರ್ವತೀರಮಣ ೧೦

ಫಣಿಫಣಾಂಚಿತ ಮಕುಟರಂಜಿತ
ಕ್ವಣಿಕ ಡಮರು ತ್ರಿಶೂಲ ಶಿಖಿ ದಿನ
ಮಣಿ ನಿಶಾಕರನೇತ್ರ ಪರಮಪವಿತ್ರ ಸುಚರಿತ್ರ
ಪ್ರಣತಕಾಮದ ಪ್ರಮಥ ಸುರಮುನಿ
ಗಣಸುಪೂಜಿತ ಚರಣಯುಗ ರಾ
ವಣಮದ ವಿಭಂಜನ ಸತತ ಮಾಂಪಾಹಿ ಮಹಾದೇವ ೧೧

ದಕ್ಷಯಜ್ಞ ವಿಭಂಜನನೆ ವಿರು
ಪಾಕ್ಷ ವೈರಾಗ್ಯಾಧಿಪತಿ ಸಂ
ರಕ್ಷಿಸೆಮ್ಮನು ಸರ್ವಕಾಲದಿ ಸಮ್ಮುದವನಿತ್ತು
ಯಕ್ಷಪತಿಸಖ ಯಜಿಪರಿಗೆ ಸುರ
ವೃಕ್ಷವೃಕ ದನುಜಾರಿ ಲೋಕಾ
ಧ್ಯಕ್ಷ ಶುಕದೂರ್ವಾಸ ಜೈಗೀಷವ್ಯ ಸಂತೈಸು ೧೨

ಹತ್ತು ಕಲ್ಪದಿ ಲವಣ ಜಲಧಿಯೊ
ಳುತ್ತಮ ಶ್ಲೋಕನನೊಲಿಸಿ ಕೃತ
ಕೃತ್ಯರಾಗಿ ಜಗತ್ಪತಿಯ ನೇಮದಿ ಕುಶಾಸ್ತ್ರಗಳ
ಬಿತ್ತರಿಸಿ ಮೋಹಿಸಿ ದುರಾತ್ಮರ
ನಿತ್ಯನಿರಯ ನಿವಾಸರೆನಿಸಿದ
ಕೃತ್ತಿವಾಸಗೆ ನಮಿಪೆ ಶೇಷಪದಾರ್ಹರಹುದೆಂದು ೧೩

ಕಂಬುಪಾಣಿಯ ಪರಮ ಪ್ರೇಮ ನಿ
ತಂಬಿನಿಯರೆಂದೆನಿಪ ಲಕ್ಷಣೆ
ಜಾಂಬವತಿ ಕಾಳಿಂದಿ ನೀಲಾಭದ್ರೆ ಸಖವಿಂದೆ
ಎಂಬ ಷಣ್ಮಹಿಷಿಯರ ದಿವ್ಯ ಪ
ದಾಂಬುಜಗಳಿಗೆ ನಮಿಪೆ ಮಮಹೃದ
ಯಾಂಬರದಿ ನೆಲೆಸಲಿ ಬಿಡದೆ ತಮ್ಮರಸನೊಡಗೂಡಿ ೧೪

ಆ ಪರಂತಪನೊಲಿಮೆಯಿಂದ ಸ
ದಾಪರೋಕ್ಷಿಗಳನಿಸಿ ಭಗವ
ದ್ರೂಪ ಗುಣಗಳ ಮಹಿಮೆ ಸ್ವಪತಿಗಳಾನನದಿ ತಿಳಿವ
ಸೌಪರಣಿ ವಾರುಣಿ ನಗಾತ್ಮಜೆ
ರಾಪನಿತು ಬಣ್ಣಿಸುವೆ ಎನ್ನ ಮ
ಹಾಪರಾಧಗಳಣಿಸದೀಯಲಿ ಪರಮ ಮಂಗಳವ ೧೫

ತ್ರಿದಿವ ತರುಮಣಿ ಧೇನುಗಳಿಗಾ
ಸ್ಪದನೆನಿಪ ತ್ರಿದಶಾಲಯಾಬ್ಧಿಗೆ
ಬದರ ನಂದದಲೊಪ್ಪುತಿಪ್ಪುದುಪೇಂದ್ರ ಚಂದ್ರಮನ
ಮೃದುಮಧುರ ಸುಸ್ತವನದಿಂದಲಿ
ಮಧುಸಮಯ ಪಿಕನಂತೆ ಪಾಡುವ
ಮುದಿರವಾಹನನಂಘ್ರಿ ಯುಗ್ಮಂಗಳಿಗೆ ನಮಿಸುವೆನು ೧೬

ಕೃತಿರಮಣ ಪ್ರದ್ಯುಮ್ನದೇವನ
ಅತುಲಬಲಲಾವಣ್ಯ ಗುಣಸಂ
ತತ ಉಪಾಸನೆ ಕೇತುಮಾಲಾ ಖಂಡದಲಿರಚಿಪ
ರತಿಮನೋಹರನಂಘ್ರಿ ಕಮಲಕೆ
ನುತಿಸುವೆನು ಭಕುತಿಯಲಿ ಮಮದು
ರ್ಮತಿಕಳೆದು ಸನ್ಮತಿಯನೀಯಲಜಸ್ರ ಎಮಗೊಲಿದು ೧೭

ಚಾರುತರ ನವವಿಧಭಕುತಿ ಗಂ
ಭೀರ ವಾರಾಶಿಯೊಳು ಪರಮೋ
ದಾರ ಮಹಿಮನಹೃದಯ ಫಣಿಪತಿಪೀಠದಲಿ ಭಜಿಪ
ಭೂರಿ ಕರ್ಮಾಕರನೆನಿಸುವ ಶ
ರೀರಮಾನಿ ಪ್ರಾಣಪತಿ ಪದ
ವಾರಿರುಹ ಕಾನಮಿಪೆ ಮದ್ಗುರುರಾಯರಹುದೆಂದು ೧೮

ವಿತತಮಹಿಮನ ವಿಶ್ವತೋಮುಖ
ನತುಳಭುಜಬಲ ಕಲ್ಪತರುವಾ
ಶ್ರಿತರೆನಿಸಿ ಸಕಲೇಷ್ಟ ಪಡೆದನುದಿನದಿ ಮೋದಿಸುವ
ರತಿಸ್ವಯಂಭುವ ವಕ್ಷವಾಚ
ಸ್ಪತಿ ಬಿಡೌಜನಮಡದಿ ಶಚಿ ಮ
ನ್ಮಥ ಕುಮಾರನಿರುದ್ಧರೆಮಗೀಯಲಿ ಸುಮಂಗಳವ ೧೯

ಭವ ವಸಧಿ ನವಪೋತ ಪುಣ್ಯ
ಶ್ರವಣಕೀರ್ತನ ಪಾದವನರುಹ
ಭವನ ತಾರಕನಾಗಿ ಭಜಕರತಾರಿಸುವ ಬಿಡದೆ
ಪ್ರವಹ ಮಾರುತದೇವ ಪರಮೋ
ತ್ಸವ ವಿಶೇಷ ನಿರಂತರ ಮಹಾ
ಪ್ರವಹದಂದದಿ ಕೊಡಲಿ ಭಗವದ್ಭಕ್ತಿಸಂತತಿಗೆ ೨೦

ಜನರನುದ್ಧರಿಸುವೆನೆನುತ ನಿಜ
ಜನಕನನುಮತದಲಿ ಸ್ವಯಂಭುವ
ಮನುವಿನಿಂದಲಿಪಡೆದ ಸುಕುಮಾರಕರನೊಲಿವೆಯಲಿ
ಜನನಿ ಶತರೂಪಾ ನಿತಂಬಿನಿ
ಮನವಚನಕಾಯದಲಿ ಬಿಡದನು
ದಿನದಿ ನಮಿಸುವೆನೆಮಗೆ ಕೊಡುಸರ್ವಮಂಗಳವ ನೊಲಿದು ೨೧

ನರನ ನಾರಾಯಣನ ಹರಿಕೃ
ಷ್ಣರಪಡೆದೆ ಪುರುಷಾರ್ದ ತೆರದಲಿ
ತರಣಿ ಶಶಿಶತರೂಪರಿಂಗೆ ಸಮನೆನಿಸಿ ಪಾಪಿಗಳ
ನಿರಯದಲಿ ನೆಲೆಗೊಳಿಸಿ ಸಜ್ಜನ
ನೆರವಿಯನು ಪಾಲಿಸುವ ಔದುಂ
ಬರಸಲಹು ಸಲಹೆಮ್ಮ ಬಿಡದಲೆ ಪರಮಕರುಣದಲಿ ೨೨

ಮಧುವಿರೋಧಿ ಮನೋಜ ಕ್ಷೀರೋ
ದಧಿ ಮಥನ ಸಮಯದಲುದಿಸಿ ನೆರೆ
ಕುಧರ ಜ್ಞಾನವಲ್ಲಭನ ಮಸ್ತಕಮಂದಿರದಿ ಮೆರೆವ
ವಿಧುತವಾಂಘ್ರಿ ಪಯೋಜಯುಗಳಕೆ
ಮಧುಪನಂದದಲೆರಗಲೆನ್ನನ
ದಧಿಪವಂದಿಪೆ ನನುದಿನಂತಸ್ತಾಪ ಪರಿಹರಿಸೊ ೨೩

ಶ್ರೀವನರುಹಾಂಬಕನ ನೇತ್ರಗ
ಳೀವೆ ಮನೆಯೆನಿಸಿ ಸುಜನರಿಗೆ ಕ
ರಾವಲಂಬನವೀವತೆರದಿ ಮಯೂಖ ವಿಸ್ತರಿಪ
ಆವಿವಸ್ವಾನ್ನೆಂದೆನಿಸುವ ವಿ
ಭಾವಸುವಹರ್ನಿಶಿಗಳಲಿ ಕೊಡ
ಲೀವಸುಂಧರೆಯೊಳು ವಿಪಶ್ಚಿತರೊಡನೆ ಸುಜ್ಞಾನ ೨೪

ಲೋಕಮಾತೆಯ ಪಡೆದು ನೀ ಜಗ
ದೇಕ ಪಾತ್ರನಿಗಿತ್ತ ಕಾರಣ
ಶ್ರೀಕುಮಾರಿಸಮೇತ ನೆಲೆಸಿದ ನಿನ್ನ ಮಂದಿರದಿ
ಆಕಮಲಭವಮುಖರು ಬಿಡದೆ ಪ
ರಾಕೆನುತ ಕಾದಿಹರೊ ಗುಣರ
ತ್ನಾಕರನೆ ಬಣ್ಣಿಸಲಳವೆ ಕೊಡಲೆಮಗೆ ಸುಮನವ ೨೫

ಪಣೆಯುಲೊಪ್ಪುವತಿಲಕ ತುಲಸೀ
ಮಣಿ ಗಣಾಂಚಿತ ಕಂಠಕರದಲಿ
ಕ್ಷಣಿತ ವೀಣಾಸುಸ್ವರದಿ ಬಹುತಾಳ ಗತ್ತಿನಲಿ
ಪ್ರಣವ ಪ್ರತಿಪಾದ್ಯನ ಗುಣಂಗಳ
ಕುಣಿಕುಣಿದು ಅತಿಸಂಭ್ರಮದಿ ಗಾ
ಯನವ ಮಾಡುವದೇವ ಋಷಿನಾರದರಿಗಭಿನಮಿಪೆ ೨೬

ಆ ಸರಸ್ವತಿ ತೀರದಲಿ ಬಿ
ನ್ನೈಸಲಾ ಮುನಿಗಳನುಡಿಗೆ ಜಡ
ಜಾಸನ ಮಹೇಶಾಚ್ಯುತರ ಲೋಕಂಗಳಿಗೆ ಪೋಗಿ
ತಾ ಸಕಲಗುಣಗಳ ವಿಚಾರಿಸಿ
ಕೇಶವನೆ ಪರದೈವವೆಂದುಪ
ದೇಶಿಸಿದ ಭೃಗುಮುನಿಪ ಕೊಡಲೆಮಗಖಿಳ ಪುರುಷಾರ್ಥ ೨೭

ಬಿಸರುಹಾಂಬಕನಾಜ್ಞೆಯಲಿ ಸುಮು
ನಸ ಮುಖನು ತಾನೆನಿಸಿ ನಾನಾ
ರಸಗಳುಳ್ಳ ಹವಿಸ್ಸುಗಳ ಸವರವರಿಗೊಯಿದೀವ
ವಸುಕುಲಾಧಿಪ ಯಜ್ಞಪುರುಷನ
ಅಸಮಬಲ ರೂಪಂಗಳಿಗೆ ವಂ
ದಿಸುವೆ ಜ್ಞಾನಯಶಸ್ಸು ವಿದ್ಯೆಸುಬುದ್ಧಿ ಕೊಡಲೆಮಗೆ ೨೮

ತಾತನಪ್ಪಣೆಯಿಂದ ನೀ ಪ್ರ
ಖ್ಯಾತಿಯುಳ್ಳರವತ್ತು ಮಕ್ಕಳ
ಪ್ರೀತಿಯಿಂದಲಿ ಪಡೆದವರನರಿಗಿತ್ತು ಮನ್ನಿಸುವ
ನೀತಿಹೋತ್ರನ ಸಮಳೆನಿಸುವ ಪ್ರ
ಸೂತಿ ಜನನಿ ತ್ವದಂಘ್ರಿಕಮಲಕ
ನಾ ತುತಿಸುತಲೆ ಬಾಗ್ವೆವೆಮ್ಮ ಕುಟುಂಬ ಸಲಹುವುದು ೨೯

ಶತಧೃತಿಯ ಸುತರೀರ್ವರುಳಿದ
ಪ್ರತಿಮ ಸು ತಪೋನಿಧಿಗಳ ಪರಾ
ಜಿತನ ಸು ಸಮಾಧಿಯೊಳೂಲಿಸಿ ಮೂಲೋಕದಲಿ ಸುರವ
ವ್ರತಿವರ ಮರೀಚ ಪುಲಹಾ
ಕ್ರತು ವಸಿಷ್ಠ ಪುಲಸ್ತ್ಯವ್ಯೆವ
ಸ್ವತನು ವಿಶ್ವಾಮಿತ್ರರಂಗಿರ ರಂಘ್ರಿಗೆರಗುವೆನು ೩೦

ದ್ವಾದಶಾದಿತ್ಯರೊಳು ಮೊದಲಿಗ
ನಾದ ಮಿತ್ರಪ್ರವಹ ಮಾನಿನಿ
ಯಾದ ಪ್ರಾವಹಿ ನಿರತಿನಿರ್ಜರ ಗುರುಮಹಿಳ ತಾರಾ
ಈ ದಿವೌಕಸರನುದಿನಾಧಿ
ವ್ಯಾಧಿ ಉಪಟಳವಳಿದು ವಿಬುಧರಿ
ಗಾದರದಿ ಕೊಡಲಖಿಳ ಮಂಗಳವಾವ ಕಾಲದಲಿ ೩೧

ಮಾನನಿಧಿಗಳೆನಿಸುವ ವಿಷ್ವ
ಕ್ಸೇನ ಧನಪಾದ್ಯನಿಲುಷರಿಗೆ ಸ
ಮಾನರೆಂಭತ್ತೈದು ಶೇಷಶತಸ್ಥ ದೇವಗಣ
ಆ ನಮಿಸುವೆನು ಬಿಡದೆ ವಿದ್ಯಾ
ಜ್ಞಾನಕಳದು ಸುಬೋಧನಿತ್ತು ಸ
ದಾನುರಾಗದಲೆಮ್ಮ ಪರಿಪಾಲಿಸಲಿ ಸಂಪದವ ೩೨

ಜೂತಮಾರುತ ಪಾಂತರಭಿಮಾ
ನೀ ತಪಸ್ವಿ ಮರೀಚಿ ಮುನಿ ಪುರು
ಹೂತ ನಂದನ ಪಾದಮಾನಿಜಯಂತರೆನುಗೊಲಿದು
ಕಾತರವ ಪುಟ್ಟಿಸದೆ ವಿಷಯದಿ
ವೀತಭಯನ ಪದಾಬ್ಜದಲಿ ವಿಪ
ರೀತ ಬುದ್ಧಿಯನೀಯದ ನಮಾ ಪಾಲಿಸಲಿ ಎಮ್ಮ ೩೩

ಕುಲಋಷಿಗಳೆಂಭತ್ತು ಹೈಹಯ
ನಿಳಿಯು ಕಂಪನಗೈವ ಪೃಥು ಮಂ
ಗಳ ಪರೀಕ್ಷಿತ ನಹುಷ ನಾಭಿ ಯಯಾತ ಶಶಿಬಿಂದು
ಬಲಿಮೊದಲು ಸಪ್ತೇಂದ್ರರಿವರಿಗೆ
ಕಲಿತ ಕರ್ಮಜ ದಿವಿಜರಂಬರು
ಉಳಿದ ಏಕಾದಶಮನುಗಳು ಉಚಥ್ಯ ಚ್ಯವನಮುಖ ೩೪

ಓದಿಸುವ ಗುರುಗಳನು ಜರಿದು ಸ
ಹೋದರರಿಗುಪದೇಶಿಸಿದ ಮಹ
ದಾದಿಕಾರಣ ಸರ್ವಗುಣ ಸಂಪೂರ್ಣ ಹರಿಯೆಂದು
ವಾದಿಸುವೆ ತ್ವತ್ಪತಿಯ ತೋರೆಂ
ದಾದನುಜ ಬೆಸಗೊಳಲು ಕಂಭದಿ
ಶ್ರೀದನಾಕ್ಷಣ ತೋರಿಸಿದ ಪ್ರಹ್ಲಾದ ನಲಹಮ್ಮ ೩೫

ಶತ ಸುಸಂಕೇತುಳ್ಳ ಪ್ರಿಯ
ವ್ರತ ಭರತ ಮಾಂಧಾತ ಪುಣ್ಯಾ
ಶ್ರಿತರು ಜಯ ವಿಜಯಾದಿಗಳು ಗಂಧರ್ವರಾಟುಜನ
ಹುತವಹಜ ಪಾವಕ ಸನಾತನ
ಪಿತೃಗಳೇಳ್ವರು ಚಿತ್ರಗುಪ್ತರು
ಪ್ರತಿದಿವಸ ಪಾಲಿಸಲಿ ತಮ್ಮವನೆಂದು ಎನಗೊಲಿದು ೩೬

ವಾಸವಾಲಯ ಶಿಲ್ಪಿ ವಿಮಲಜ
ಲಾಶಯಗಳೊಳು ರಮಿಪ ಊರ್ವಶಿ
ಭೇಶರವಿಗಳ ರಿಪುಗಳೆನಿಸುವ ರಾಹು ಕೇತುಗಳು
ಶ್ರೀಶಪದ ಸಂಧಾನ ಧೂಮಾ
ರ್ಚೀಶ ದಿವಿಜರು ಕರ್ಮಜರಿಗೆ ಸ
ಮಾಸಮಾನ ದಿವೌಕಸರು ಕೊಡಲೆಮಗೆ ಮಂಗಳವ ೩೭

ದ್ಯುನದಿ ಶಾಮಲೆ ಸಂಜ್ಞೆ ರೋಹಿಣಿ
ಧನಪ ಪರ್ಜನ್ಯಾನಿರುದ್ಧನ
ವನಿತೆ ಬ್ರಹ್ಮಾಂಡಾಭಿಮಾನಿ ವಿರಾಟ ದೇವಿಯರ
ನೆನೆವೆ ನಾನಲವಿಂದ ದೇವಾ
ನನ ಮಹಿಳೆ ಸ್ವಾಹಾಖ್ಯರಾಲೋ
ಚನೆಕೊಡಲಿ ನಿರ್ವಿಘ್ನದಿಂ ಭಗವದ್ಗುಣಂಗಳಲಿ ೩೮

ವಿಧಿಪಿತನ ಪಾದಾಂಬುಜಗಳಿಗೆ
ಮಧುಪನಂತೆ ವಿರಾಜಿಪಾಮಲ
ಉದಕಗಳಿಗೆ ಸದಾಭಿಮಾನಿಗಳೆಂದೆನಿಸಿಕೊಂಬ
ಬುಧಗೆ ನಾವಂದಿಸುವೆ ಸರ್ವೋ
ದಧಿ ನಿರಂತರ ಒಲಿದು ಎಮಗ
ಭ್ಯುದಯ ಪಾಲಿಸಲೆಂದು ಪರಮೋತ್ಸಹದಲನುದಿನದಿ ೩೯

ಶ್ರೀವಿರಂಚಾದ್ಯರಮನಕೆ ನಿಲು
ಕಾವಕಾಲಕೆ ಜನನರಹಿತನ
ತಾವೊಲಿಸಿ ಮಗನೆಂದು ಮುದ್ದಿಸಿ ಲೀಲೆಗಳನೋಳ್ಪ
ದೇವಕಿಗೆ ವಂದಿಪೆ ಯಶೋದಾ
ದೇವಿಗಾನಮಿಸುವೆನು ಬಿಡದೆ ಕೃ
ಪಾವಲೋಕನದಿಂದ ಸಲಹುವುದೆಮ್ಮ ಸಂತತಿಯ ೪೦

ಪಾಮರರನು ಪವಿತ್ರಗೈಸುವ
ಶ್ರೀ ಮುಕುಂದನ ಪರಮಮಂಗಳ
ನಾಮಗಳಿಗಭಿಮಾನಿಯಾದ ಉಷಾಖ್ಯದೇವಿಯರ
ಭೂಮಿಯೊಳಗುಳ್ಳಖಿಳ ಸಜ್ಜನ
ರಾಮಯಾದಿಗಳಳಿದು ಸಲಹಲಿ
ಆ ಮರುತ್ತನ ಮನೆಯ ವೈದ್ಯರ ರಮಣಿ ಪ್ರತಿದಿನದಿ ೪೧

ವಸಧಿವಸನೆವರಾದ್ರಿ ನಿಚಯ
ಸ್ತನವಿರಾಜಿತೆ ಚೇತನಾಚೇ
ತನವಿಧಾರಕೆ ಗಂಧರಸರೂಪಾದಿ ಗುಣವಪುಷೆ
ಮುನಿಕುಲೋತ್ತಮ ಕಶ್ಯಪನ ನಿಜ
ತನುಜೆ ನಿನಗಾನಮಿಪೆ ನೆನ್ನವ
ಗುಣಗಳೆಣಿಸದೆ ಪಾಲಿಪುದು ಪರಮಾತ್ಮನರ್ಧಾಂಗಿ ೪೨

ಪುರುಟಲೋಚನ ನಿನ್ನ ಕದ್ದೊಯ್ದಿ
ರಲು ಪ್ರಾರ್ಥಿಸಿ ದೇವತೆಗಳು
ತ್ವರವಲಾಲಿಸಿ ತಂದ ವರಹಾ ರೂಪತಾನಾಗಿ
ಧರಣಿ ಜನನಿಯೆ ತ್ವತ್ಪದಾಬ್ಜಕೆ
ಎರಗಿಬಿನ್ನೈಸುವೆನು ಪಾದ
ಸ್ಪರುಶ ಮೊದಲಾದಖಿಳ ದೋಷಗಳೆಣಿಸದಿರು ಎಂದು ೪೩

ಹರಿಗುರುಗಳರ್ಚಿಸದ ಪಾಪಾ
ತ್ಮರನು ಶಿಕ್ಷಿಸಲೋಸುಗ ಶನೈ
ಶ್ಚರನೆನಿಸಿ ದುಷ್ಫಲಗಳೀವೆ ನಿರಂತರವು ಬಿಡದೆ
ತರಣಿನಂದನ ನಿನ್ನ ಪಾದಾಂ
ಬುರುಹಗಳಿಗಾನಮಿಪೆ ಬಹು ದು
ಸ್ತರಭವಾರ್ಣವ ಮಗ್ನನಾದೆನ್ನುದ್ಧರಿಸಬೇಕು ೪೪

ನಿರತಿಶಯನಿಜಜ್ಞಾನ ಪೂರ್ವಕ
ವಿರಚಿಸುವ ನಿಷ್ಕಾಮ ಕರ್ಮಗ
ಳರಿತು ತತ್ತತ್ಕಾಲದಲಿ ತಜ್ಜನ್ಯ ಫಲರಸವ
ಹರಿಯ ನೇಮದಲುಣಿಸಿ ಬಹು ಜೀ
ವರಿಗೆ ಕರ್ಮಪನೆನಿಪ ಗುರು ಪು
ಷ್ಕರನು ಸತ್ಕ್ರಿಯಗಳಲಿ ನಿರ್ವಿಘ್ನತೆಯ ತಾ ಕೊಡಲಿ ೪೫

ಶ್ರೀನಿವಾಸನ ಪರಮ ಕಾರು
ಣ್ಯಾನಿವಾಸಸ್ಥಾನರೆನಿಪ ಕೃ
ಶಾನುಜರು ಸಾಹಸ್ರ ಷೋಡಶ ಶಕರು ಶ್ರೀಕೃಷ್ಣ
ಮಾನಿನಿಯರೆಪ್ಪತ್ತು ಯಕ್ಷರು
ದಾನವರುಮೂವತ್ತು ಚಾರಣ
ಜಾನಜಾಮರ ರಪ್ಸರರು ಗಂಧರ್ವರಿಗೆ ನಮಿಪೆ ೪೬

ಕಿನ್ನರರು ಗುಹ್ಯಕರು ರಾಕ್ಷಸ
ಪನ್ನಗರು ಪಿತೃಗಳು ಸಿದ್ಧರು
ಸನ್ನುತಾಜಾನಜರು ಸಮರಿವರಮರಯೋನಿಜರು
ಇನ್ನಿವರ ಗಣವೆಂದು ಬಣ್ಣಿಸ
ಲೆನ್ನಳವೆ ಕರುಣದಲಿ ಪರಮಾ
ಪನ್ನಿಜನರಿಗೆ ಕೊಡಲಿಸನ್ಮುದ ಸುಪ್ರತಾಪವನು ೪೭

ಆ ಯಮುನೆಯೊಳು ಸಾದರದಿ ಕಾ
ತ್ಯಾಯಸೀವ್ರತ ಧರಿಸಿ ಕಲರು ದ
ರಾಯುಧನೆ ಪತಿಯೆನಿಸಿ ಕೆಲವರು ಜಾರತನದಲ್ಲಿ
ವಾಯುಪಿತನೊಲಿಸಿದರು ಈರ್ವಗೆ
ತೋಯಜಸರಸರ ಪಾದಕಮಲಕ
ನಾ ಯೆರಗುವ ಮನೋರಥಂಗಳ ಸಲಿಸಲಿಮಗೆಂದು ೪೮

ನೂರುಮುನಿಗಳ ಉಳಿದು ಮೇಲಣ
ನೂರುಕೋಟಿ ತಪೋಧನರ ಪಾ
ದಾರವಿಂದಕೆ ಮುಗಿವ ಕರಗಳನುದ್ಧರಿಸಲೆಂದು
ಮೂರುಸಪ್ತ ಶತಾಹ್ವಯರ ತೊರೆ
ದೀ ಋಷಿಗಳಾನಂತರದಲಿಹ
ಭೂರಿಪಿತೃಗಳು ಕೊಡಲಿ ಎಮಗೆ ಸದಾ ಸುಮಂಗಳವ ೪೯

ಪಾವನಕೆ ಪಾವನೆನಿಸುವ ರ
ಮಾವಿನೋದನ ಗುಣಗಣಂಗಳ
ಸಾವಧಾನದಲೇಕ ಮಾನಸರಾಗಿ ಸುಸ್ವರದಿ
ಆವಿಬುಧಪತಿ ಸಭೆಯೊಳಗೆ ನಾ
ನಾ ವಿಲಾಸದಿ ಪಾಡಿ ಸುಖಿಸುವ
ದೇವಗಂಧರ್ವರು ಕೊಡಲಿ ಎಮಗಖಿಳ ಪುರುಷಾರ್ಥ ೫೦

ಭುವನ ಪಾವನವೆನಿಪ ಲಕುಮೀ
ಧವನ ಮಂಗಳ ದಿವ್ಯನಾಮ
ಸ್ತವ ಗೈವ ಮನುಷ್ಯ ಗಂಧರ್ವರಿಗೆ ವಂದಿಸುವೆ
ಪ್ರವರ ಭೂಭುಜರುಳಿದ ಮಧ್ಯಮ
ಕುವಲಯಪರೆಂದೆನಿಸಿಕೊಂಬರ
ದಿವಸದಿವಸಂಗಳಲಿ ನೆನೆವೆನು ಕರಣಶುದ್ಧಿಯಲಿ ೫೧

ಶ್ರೀಮುಕುಂದನ ಮೂರ್ತಿಗಳ ಸಾ
ನಾನಿನಿಯವರೋಲ್ ಹೃದಯ ವಾರಿಜ
ವ್ಯೋಮಮಂಡಲ ಮಧ್ಯದಲಿ ಕಾಣುತಲಿ ನೋಡಿಸುವ
ಆ ಮನುಷ್ಯೋತ್ತಮರ ಪದಯುಗ
ತಾಮರಸಗಳಿಗೆರಗುವೆ ಸದಾ
ಕಾಮಿತಾರ್ಥಗಳಿತ್ತು ಸಲಹಲಿ ಪ್ರಣತಜನತತಿಯ ೨೭

ಈ ಮಹೀಮಂಡಲದೊಳಿಹ ಗುರು
ಶ್ರೀಮದಾಚಾರ್ಯರ ಮತಾನುಗ
ರಾ ಮಹಾವೈಷ್ಣವರ ವಿಷ್ಣುಪದಾಬ್ಜ ಮಧುಕರರ
ಸ್ತೋಮ ಕಾಮಿಸುವೆನವರ ವತ
ನಾಮಗಳನೇನೇಳ್ವ ಬಹುವಿಧ
ಯಾಮ ಯಾಮಂಗಳಲಿ ಬೋಧಿಸಲಿನಗೆ ಸನ್ಮತಿಯ ೨೮

ಮಾನಸಯ್ಯನ ಕರುಣ ಪಾರಾ
ವಾರ ಮುಖ್ಯ ಸುಪಾತ್ರವೆನಿಪ ಸ
ರೋರುಹಾಸನ ವಾಣಿರುದ್ರೇಂದ್ರಾದಿ ಸುರನಿಕರ
ತಾರತಮ್ಯಾತ್ಮಕ ಸುಪದ್ಯಗ
ಳಾರು ಪಠಿಸುವ ರಾಜನರಿಗೆ ರ
ಮಾರಮಣ ಪೂರೈಸಲೀಪ್ಸಿತ ಸರ್ವಕಾಲದಲಿ ೨೯

ಮೂರುಕಾಲಗಳಲ್ಲಿ ಪಠಿಸೆ ಶ
ರೀರ ವಾಙ್ಮನಶುದ್ಧಿ ಮಾಳ್ಪುದು
ದೂರಗೈಸುವುದಖಿಳ ಪಾಪಸಮೂಹ ಪ್ರತಿದಿನದಿ
ಚೋರಭಯ ರಾಜಭಯ ನಕ್ರಚ
ಮೂರು ಶಸ್ತ್ರ ಜಲಾಗ್ನಿ ಜಾತನು
ಘೋರಗಜ್ವರನರಕಭಯ ಸಂಭವಿಸದೆಂದೆಂದು ೩೦॥

ಜಯಜಯತು ತ್ರಿಜಗದ್ವಿಲಕ್ಷಣ
ಜಯಜಯತು ಜಗದೇಕಕಾರಣ
ಜಯಜಯತು ಜಾನಕಿರಮಣ ನಿರ್ಗತಜರಾಮರಣ
ಜಯಜಯತು ಜಾನ್ಹವಿಜನಕ ಜಯ
ಜಯತು ದೈತ್ಯಕುಲಾಂತಕಭವಾ
ಮಯಹರ ಜಗನ್ನಾಥವಿಠ್ಠಲ ಪಾಹಿಮಾಂ ಸತತ ೫೬

ಅಂತು ಸಂಧಿ ೩೨ಕ್ಕೆ ಪದ್ಯಗಳು ೯೮೬ಕ್ಕೆ ಮಂಗಳಂ

ಶ್ರೀಕೃಷ್ಣಾರ್ಪಣಮಸ್ತು



## ಸಂಧಿ ೩೩ "ಫಲಸ್ತುತಿ ಸಂಧಿ"

ಹರಿಃ ಓಂ

(ಶ್ರೀದವಿಠಲಾಂಕಿತರಾದ ಶ್ರೀ ಕರ್ಜಗಿ ದಾಸರಾಯರಿಂದ ವಿರಚಿತವಾದುದು)

**ಹರಿಕಥಾಮೃತಸಾರ ಗುರುಗಳ**
**ಕರುಣದಿಂದಾಪನಿತು ಪೇಳುವೆ**
**ಪರಮ ಭಗವದ್ಭಕ್ತರಿದನಾದರದಿ ಕೇಳುವುದು** ಪ

ಹರಿಕಥಾಮೃತಸಾರ ಶ್ರೀಮದ್
ಗುರುವರ ಜಗನ್ನಾಥ ದಾಸರ
ಕರತಲಾಮಲಕವೆನೆ ಪೇಳಿದ ಸಕಲ ಸಂಧಿಗಳ
ಪರಮ ಪಂಡಿತ ಮಾನಿಗಳು ಮ
ತ್ಸರಿಸಲೆದೆಗಿಚ್ಚಾಗಿ ತೋರುವ
ದರಸಿಕರಿಗಿದು ತೋರಿ ಪೇಳುವುದಲ್ಲ ಧರೆಯೊಳಗೆ ೧

ಭಾಮಿನೀ ಷಟ್ಪದಿಯ ರೂಪದ
ಲೀ ಮಹಾದ್ಭುತ ಕಾವ್ಯದಾದಿಯೊ
ಳಾಮನೋಹರ ತರತಮಾತ್ಮಕ ನಾಂದಿ ಪದ್ಯಗಳ
ಯಾಮ ಯಾಮಕೆ ಪಠಿಸುವವರ ಸು
ಧಾಮಸಖ ಕೈವಿಡಿಯಲೋಸುಗ
ಪ್ರೇಮದಿಂದಲಿ ಪೇಳ್ದ ಗುರು ಕಾರುಣ್ಯಕೇನಂಬ ೨

ಸಾರವೆಂದರೆ ಹರಿಕಥಾಮೃತ
ಸಾರವೆಂಬುವುದೆಮ್ಮ ಗುರುವರ
ಸಾರಿದಲ್ಲದೆ ತಿಳಿಯದೆನುತ ಮಹೇಂದ್ರ ನಂದನನ
ಸಾರಥಿಯ ಬಲಗೊಂಡು ಸಾರಾ
ಸಾರಗಳ ನಿರ್ಣೈಸಿ ಪೇಳ್ದನು
ಸಾರ ನಡೆವ ಮಹಾತ್ಮರಿಗೆ ಸಂಸಾರವೆಲ್ಲಿಹುದೊ ೩

ದಾಸವರ್ಯರ ಮುಖದಿನಿಂದು ರ
ಮೇಶನನು ಕೀರ್ತಿಸುವ ಮನದಭಿ
ಲಾಷೆಯಲಿ ವರ್ಣಾಭಿಮಾನಿಗಳೊಲಿದು ಪೇಳಿಸಿದ
ಈ ಸುಲಕ್ಷಣ ಕಾವ್ಯದೊಳು ಯತಿ
ಪ್ರಾಸಗಳಿಗೆ ಪ್ರಯತ್ನವಿಲ್ಲದೆ
ಲೇಸು ಲೇಸೆನೆ ಶ್ರಾವ್ಯಮಾದುದು ಕುರುಹು ಕವಿಗಳಿಗೆ ೪

ಪ್ರಾಕೃತೋಕ್ತಿಗಳೆಂದು ಬರಿದೆ ಮ
ಹಾಕೃತಘ್ನರು ಜರಿವರಲ್ಲದೆ
ಸ್ವೀಕೃತವ ಮಾಡದಲೆ ಬಿಡುವರ ಕುರುಹು ಕವಿಗಳಿಗೆ
ಶ್ರೀ ಕೃತೀಪತಿಯಮಲ ಗುಣಗಳು
ಈ ಕೃತಿಯೊಳುಂಟಾದ ಬಳಿಕಿದು
ಪ್ರಾಕೃತವೆ? ಸಂಸ್ಕೃತದ ಸಡಗರವೇನು ಸುಗುಣರಿಗೆ ೫

ಶ್ರುತಿಗೆ ಶೋಭನಮಾಗದೊಡೆ ಜಡ
ಮತಿಗೆ ಮಂಗಳವೀಯದೊಡ ಶ್ರುತಿ
ಸ್ಮೃತಿಗೆ ಸಮ್ಮತವಲ್ಲದಿರ್ದೊಡೆ ನಮ್ಮ ಗುರುರಾಯ
ಮಥಿಸಿ ಮಧ್ವಾಗಮ ಪಯೋಬ್ಧಿಯ
ಕ್ಷಿತಿಗೆ ತೋರಿದ ಬ್ರಹ್ಮವಿದ್ಯಾ
ರತರಿಗೀಪ್ಸಿತ ಹರಿಕಥಾಮೃತಸಾರ ಸೊಗಸುವುದೆ ? ೬

ಭಕ್ತಿವಾದದಿ ಪೇಳ್ದನೆಂಬ ಪ್ರ
ಸಕ್ತಿ ಸಲ್ಲದು ಕಾವ್ಯದೊಳು ಪುನ
ರುಕ್ತಿ ಶುಷ್ಕ ಸಮಾಸಪದ ವ್ಯತ್ಯಾಸ ಮೊದಲಾದ
ಯುಕ್ತಿ ಶಾಸ್ತ್ರ ವಿರುದ್ಧ ಶಬ್ದ ವಿ
ಭಕ್ತಿ ವಿಷಯಗಳಿರಲು ಜೀವ
ಮುಕ್ತಿ ಯೋಗ್ಯವಿದೆಂದು ಶ್ರೀಮದನಂತ ಮೆಚ್ಚುವನು ೭

ಆಶುಕವಿ ಕುಲ ಕಲ್ಪತರು ದಿ
ಗ್ದೇಶವರಿಯಲು ರಂಗನೊಲುಮೆಯ
ದಾಸಕೂಟಸ್ಥರಿಗೆರಗಿ ನಾ ಬೇಡಿಕೊಂಬುವೆನು
ಈ ಸುಲಕ್ಷಣ ಹರಿಕಥಾಮೃತ
ಮಿಾಸಲಳಿಯದೆ ಸಾರದೀರ್ಘ
ದ್ವೇಷಿಗಳಿಗೆರೆಯುದಲೆ ಸಲಿಸುವುದೆನ್ನ ಬಿನ್ನಪವ ೮

ಪ್ರಾಸಗಳ ಪೊಂದಿಸದೆ ಶಬ್ದ
ಶ್ಲೇಷಗಳ ಶೋಧಿಸದೆ ದೀರ್ಘ
ಹ್ರಾಸಗಳ ಸಲ್ಲಿಸದೆ ಷಟ್ಪದಿಗತಿಗೆ ನಿಲ್ಲಿಸದೆ
ದೂಷಕರು ದಿನದಿನದಿ ಮಾಡುವ
ದೂಷಣವೆ ಭೂಷಣವು ಎಂದುಪ
ದೇಶಗಮ್ಯವು ಹರಿಕಥಾಮೃತಸಾರ ಸಾಧ್ಯರಿಗೆ ೯

ಅಶ್ರುತಾಗಮಭಾವ ಇದರ ಪ
ರಿಶ್ರಮವ ಬಲ್ಲವರಿಗಾನಂ
ದಾಶ್ರುಗಳ ಮಳೆಗರಿಸಿ ವಿಸ್ಮಯರೆಸುವ ಚಮತ್ಕೃತಿಯ
ಮಿಶ್ರರಿಗೆ ಮರೆಮಾಡಿ ದಿವಿಜರ
ಜಸ್ರದಲಿ ಕಾಯ್ದಿಪ್ಪರಿದರೊಳು
ಪಶ್ರುತಿಗಳೈತಪ್ಪವೇ ನಿಜಭಕ್ತಿಯುಳ್ಳರಿಗೆ ೧೦

ನಿಚ್ಚ ನಿಜಜನ (ಮೆಚ್ಚ) ನೆಚ್ಚನೆಲಿಗೊಂ (ಗೋಧನ)
(ಅ)ಡಚ್ಚ ಭಾಗ್ಯವು ಪೆಚ್ಚ ಪೇರ್ಮೆಯು
ಪೆಚ್ಚ ಕೇಳ್ವನು ಮೆಚ್ಚಮಲಮನ ಮುಚ್ಚಲೆಂದೆನುತ
ಉಚ್ಚವಿಗಳಿಗೆ ಪೊಚ್ಚ ಪೊಸತೆನ
ಲೆಚ್ಚರಿಸಿದೀ ಸಚ್ಚರಿತ್ರೆಯ
ನುಚ್ಚರಿಸೆ ಸಿರಿವತ್ಸಲಾಂಛನ ಮೆಚ್ಚಲೇನರಿದು ೧೧

ಸಾಧು ಸಭೆಯೊಳು ಮೆರೆಯ ತತ್ವ ಸು
ಬೋಧ ವೃಷ್ಟಿಯಗರೆಯ
ಕಾಮಕ್ರೋಧ ಬೀಜವ ಹುರಿಯ ಖಳರೆದೆ ಬಿರಿಯ ಕರಕರಿಯ
ವಾದಿಗಳ ಪಲ್ಮುರಿಯ ಪರಮ ವಿ
ನೋದಿಗಳ ಮೈಮರೆಯಲೋಸುಗ
ಹಾದಿದೋರಿದ ಹರಿಯ ಬಹು ಚಾತುರಿಯ ಹೊಸಪರಿಯ ೧೨

ವ್ಯಾಸತೀರ್ಥರ ಒಲಿಮೆ ವಿಠಲೋ
ಪಾಸಕ ಪ್ರಭುವರ್ಯ ಪುರಂದರ
ದಾಸರಾಯರ ದಯವೊ ತಿಳಿಯದು ಓದಿ ಕೇಳದಲೆ
ಕೇಶವನ ಗುಣಮಣಿಗಳನು ಪ್ರಾ
ಣೇಶಗೊಪ್ಪಿಸಿ ವಾದಿರಾಜರ
ಕೋಶಕೊಪ್ಪುವ ಹರಿಕಥಾಮೃತಸಾರ ಸಂಭವವು ೧೩

ಹರಿಕಥಾಮೃತಸಾರ ನವರಸ
ಭರಿತ ಬಹು ಗಂಭೀರ ರತ್ನಾ
ಕರರುಚಿರ ಶೃಂಗಾರ ಸಾಲಂಕಾರ ವಿಸ್ತಾರ
ಸರಸ ನರಕಂಠೀರವಾಖ್ಯರು
ದರಜನಿತ ಸುಕುಮಾರ ಸಾತ್ವೀ
ಕರಿಗೆ ಪರಮೋದಾರ ಮಾಡಿದ ಮಹದುಪಕಾರ ೧೪

ಅವನಿಯೊಳ್ಜ್ಯೋತಿಷ್ಮತಿಯತೈ
ಲವನು ಪಾಮರನುಂಡು ಜೀರ್ಣಿಸ
ಲವನ ಪಂಡಿತನೋ ಕರಿಪನವಿವೇಕನಪ್ಪಂತೆ
ಶ್ರವಣಮಂಗಳ ಹರಿಕಥಾಮೃತ
ಸವಿದು ನಿರ್ಗುಣಸಾರ ಮುಕ್ತಿಸ
ಲಸನಿಪುಣನೈಯೋಗ್ಯಗಲ್ಲದೆ ದಕ್ಕಲರಿಯದಿದು ೧೫

ಅಕ್ಕರದೊಳೀಕಾವ್ಯದೊಳು ಒಂ
ದಕ್ಕರವ ಬರೆದೋದಿದವ ದೇ
ವಕ್ಕಳಿಂದುಪ್ಪತ್ಯಜ್ಞೆನಿಸಿ ಧರ್ಮಾರ್ಥ ಕಾಮಗಳ
ಲೆಕ್ಕಿಸದೆ ಲೋಕೈಕಸಾಧನ
ಭಕ್ತಿಭಾಗ್ಯವ ಪಡೆವ ಜೀವ
ನ್ಮುಕ್ತಗಲ್ಲದೆ ಹರಿಕಥಾಮೃತಸಾರ ಸೊಗಸುವುದೆ ೧೬

ಒತ್ತಿಬಹ ವಿಘ್ನಗಳ ತಡೆವಪ
ಮೃತ್ಯುವಿಗೆ ಮರೆಮಾಡಿ ಕಾಲನ
ಭೃತ್ಯರಿಗೆ ಭೀಕರವ ಪುಟ್ಟಿಸಿ ಸಕಲ ಸಿದ್ಧಿಗಳ
ಒತ್ತಿಗೊಳ್ಳಿಸಿ ವನರುಹೇಕ್ಷಣ
ನೃತ್ಯಮಾಡುವ ನವನವುನೆಯೊಳು
ನಿತ್ಯಮಂಗಳ ಹರಿಕಥಾಮೃತಸಾರ ಪಠಿಸುವರ ೧೭

ಆಯುರಾರೋಗ್ಯೈಶ್ವರಿಯ ಯಶ
ಧೈರ್ಯ ಬಲಸಮುಪಹಯ ಶೌರ್ಯೌ
ದಾರ್ಯ ಗುಣಗಾಂಭೀರ್ಯ ಚಾತುರ್ಯಗಳ ಮೊದಲಾದ
ಆಯತಗಳುಂಟಾಗ ಲೊಂದ
ಧ್ಯಾಯ ಪಠಿಸಿದ ಮಾತ್ರದಿಂ ಶ್ರವ
ಣೀಯವಲ್ಲವೆ ಹರಿಕಥಾಮೃತಸಾರ ಸುಜನರಿಗೆ ೧೮

ಕುರುಡ ಕಂಗಳಪಡೆವ ಬಧಿರನಿ
ಗೆರಡುಕಿವಿ ಕೇಳ್ಬಹುದು ಬೆಳೆಯದ
ಮುರುಡ ಮದನಾಕೃತಿಯ ತಾಳ್ವನು ಕೇಳ್ದ ಮಾತ್ರದಲಿ
ಬರಡು ಹೈನಾಗುವುದು ಪುಳ್ದರೆ
ಕೊರಡು ಪಲ್ಲವಿಸುವುವು ಪ್ರತಿದಿನ
ಹುರುಡಿಲಾದರು ಹರಿಕಥಾಮೃತಸಾರವನು ಪಠಿಸೆ ೧೯

ನಿರ್ಜರ ತರಂಗಿಣಿಯೊಳನುದಿನ
ಮಜ್ಜನಾದಿ ಸಮಸ್ತ ಕರ್ಮವಿ
ವರ್ಜಿತಾಶಾಪಾಶದಿಂದಲಿ ಮಾಡಿದದಧಿಕಫಲ
ಹೆಜ್ಜೆಹೆಜ್ಜೆಗೆ ದೊರೆಯದಿಪ್ಪವೆ
ಸಜ್ಜನರು ಶಿರದೂಗುವಂದದಿ
ಘರ್ಜಿಸುತಲೀ ಹರಿಕಥಾಮೃತಸಾರ ಪಠಿಸುವರ ೨೦

ಸತಿಯರಿಗೆ ಪತಿಭಕುತಿ ಪತ್ನಿಯ
ವ್ರತ ಪುರುಷರಿಗೆ ಹರುಷ ನೆಲೆಗೊಂ
ಡತಿ ಮನೋಹರರಾಗಿ ಗುರುಹಿರಿಯರಿಗೆ ಜಗದೊಳಗೆ
ಸತತ ಮಂಗಳವೀವ ಬಹಳಸು
ಕೃತಿಗಳೆನಿಸುತ ಸುಲಭದಿಂ ಸ
ದ್ಗತಿಯ ಪಡೆವರು ಹರಿಕಥಾಮೃತಸಾರವನು ಪಠಿಸೆ ೨೧

ಎಂತುವರ್ಣಿಸಲೆನ್ನಳವೆ ಭಗ
ವಂತ ನಮಲಗುಣಾನುವಾದಗ
ಳೆಂತು ಪರಿಯಲಿ ಪೂರ್ಣಬೋಧರ ಮತವ ಪೊಂದಿದರ
ಚಿಂತನೆಗೆ ಬಪ್ಪಂತೆ ಬಹು ದೃ
ಷ್ಟಾಂತ ಪೂರ್ವಕವಾಗಿ ಪೇಳ್ದಮ
ಹಂತರಿಗೆ ನರರೆಂದು ಪೇಳ್ವರೆ ನರಕಭಾಗಿಗಳು ೨೨

ಮಣಿಖಚಿತ ಹರಿವಾಣದಲಿ ವಾ
ರಣ ಸುಭೋಜ್ಯ ಪದಾರ್ಥ ಕೃಷ್ಣಾ
ರ್ಪಣವೆನುತ ಪಸಿದವರಿಗೋಸುಗ ನೀಡುವಂದದಲಿ
ಪ್ರಣತರಿಗೆ ಪೊಂಗಿ ನಡೆವರ ವಾ
ಙ್ಮಣಿಗಳಿಂ ವಿರಚಿಸಿದ ಕೃತಿಯೊಳು
ಉಣಿಸಿ ನೋಡುವ ಹರಿಕಥಾಮೃತಸಾರವನುದಾರ ೨೩

ದುಷ್ಟರೆನ್ನದೆ ದುರ್ವಿಷಯದಿಂ
ಪುಷ್ಟರೆನ್ನದೆ ಪೂತಕರ್ಮ
ಭ್ರಷ್ಟರೆನ್ನದೆ ಶ್ರೀದವಿಠ್ಠಲ ವೇಣುಗೋಪಾಲ
ಕೃಷ್ಣ ಕೈಪಿಡಿಯುವನು ಸತ್ಯ ವಿ
ಶಿಷ್ಟದಾಸತ್ವವನು ಪಾಲಿಸಿ
ನಿಷ್ಟಯಿಂದಲಿ ಹರಿಕಥಾಮೃತಸಾರ ಪಠಿಸುವರ - ೨೪

---

ಹರಿಕಥಾಮೃತಸಾರ ಗುರುಗಳ
ಕರುಣದಿಂದಾಪನಿತು ಪೇಳುವೆ
ಪರಮಭಗವದ್ಭಕ್ತರಿದ ನಾದರದಿ ಕೇಳುವುದು ೫

ಅಂತು ಸಂಧಿ ೩೩ಕ್ಕೆ ಪದ್ಯಗಳು ೧೦೧೦ಕ್ಕೆ ಮಂಗಳಂ

ಶ್ರೀ ಜಗನ್ನಾಥ ದಾಸಾರ್ಯಾಂತರ್ಯಾಮಿ ಶ್ರೀಭಾರತೀರಮಣ
ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀವೇಂಕಟೇಶ ಪ್ರೀಯತಾಂ

ಪ್ರೀತೋಭವತು

ಶ್ರೀಕೃಷ್ಣಾರ್ಪಣಮಸ್ತು



